

ಯೋಗಿ ಮಿಲರೇಪ

(ಒಂದು ಹಳೆಯ ಚಿತ್ರಕೃತಿಯನ್ನನುಕರಿಸಿ ಬರೆದದ್ದು)

ಕನ್ನಡ ಕಾವ್ಯಮಾಲೆ

# ಟಿಬೆಟ್ಟಿನ ಯೋಗಿ ಮಿಲರೇಪ

ಎಸ್. ಕೆ. ರಾಮಚಂದ್ರರಾವ್, ಎಂ.ಎ.



ಮೈಸೂರು
ಕಾವ್ಯಾಲಯ :: ಪ್ರಕಾಶಕರು

ಮೊದಲನೆಯ ಮುದ್ರಣ : ೧೯೫೮



Published by
K. Chidambaram, at Kavyalaya, Mysore

ಬೆಲೆ : ರೂ. ೧.೭೫ ಕ್ಯಾಲಿಕೊ ಪ್ರತಿ ರೂ. ೩.೨೫

ಮುದ್ರಕರು :
ವೆಸ್ಲಿ ಪ್ರೆಸ್, ಮೈಸೂರು

ನನ್ನ

**ಮಾತಾಪಿತೃಗಳಲ್ಲಿ**

ಸಮರ್ಪಿತ

# ಪೀಠಿಕೆ

ಮಂಜು ಮುಸುಕಿದ ಹಿಮಾಲಯದ ಅಂಚಿನ ಟಿಬೆಟ್ ಮತ್ತು ಅದರ ಸರೆಹೊರೆಯ ದೇಶಗಳಲ್ಲಿ ಮಿಲರೇಪನ ಹೆಸರು ವಿಸ್ತೃತ, ವಿಖ್ಯಾತ. ತನ್ನ ಜೀವಿತ ಕಾಲದಲ್ಲೇ ದುಷ್ಕರವಾದ ತಪಶ್ಚರ್ಯೆಯಿಂದ ದುರ್ಲಭವಾದ ಅಲೌಕಿಕ ಸಿದ್ಧಿಗಳನ್ನು ಪಡೆದು ಜೀವನ್ಮುಕ್ತನಾಗಿ ವಿಹರಿಸಿ ಲೋಕಸಂಗ್ರಹ ಮಾಡಿದ ಯೋಗೀಶ್ವರನೆಂದು ಅವನ ಖ್ಯಾತಿ. ಗೌತಮ ಬುದ್ಧನ ದೇಶನಕ್ಕೆ ಸಂಸ್ಕಾರಬಲದಿಂದ, ಪ್ರಸಂಗವಶದಿಂದ ಕಣ್ತೆರೆದು, ಅವನ ಆದೇಶದ ಕಠಿನ ಮಾರ್ಗವನ್ನೇ ವರಿಸಿ ಪ್ರತಿಬುದ್ಧನಾದವನೆಂದು ಅವನ ಹೆಸರು ನಿಂತಿದೆ. ದಾರ್ಶನಿಕನೂ ಯೋಗಿಯೂ ಸಿದ್ಧಪುರುಷನೂ ಕಾಲಜ್ಞಾನಿಯೂ ಆದ ಮಿಲರೇಪ ಅನುಭಾವಿ ಕವಿಯೂ ಹೌದು. ಅವನ ಕವನಗಳು ಟಿಬೆಟ್ಟಿನ ಸಾಹಿತ್ಯದಲ್ಲಿ ತುಂಬ ಪ್ರಭಾವಶಾಲಿ. ಸಹಜವಾಗಿ ಶ್ರದ್ಧಾಳುಗಳಾದ, ಸರಳರಾದ ಟಿಬೆಟ್ಟಿನ ಜನರಿಗೆ ಇಷ್ಟು ಪ್ರತಿಭಾಶಾಲಿಯಾದ ವ್ಯಕ್ತಿ ಅವತಾರಪುರುಷನೆಂದು ಅನಿಸಿದ್ದು ಆಶ್ಚರ್ಯವೇನಲ್ಲ.

ಮಿಲರೇಪನ ಕಾಲ ಇಂದಿಗೆ ಎಂಟುನೂರು ವರ್ಷಗಳಿಗೂ ಮುಂಚೆ. ಅವನ ವಿಚಾರವಾಗಿ ಅದ್ಭುತವಾದ ದಂತಕಥೆಗಳು ಪ್ರಚಲಿತವಾಗಿದ್ದರೂ ಅವನು ಐತಿಹಾಸಿಕ ವ್ಯಕ್ತಿ ಎನ್ನುವುದರಲ್ಲಿ ಸಂದೇಹ ಇಲ್ಲ. ಟಿಬೆಟನ್ ಜನರ ಗುರುಪರಂಪರೆಯಲ್ಲಿ,-ಲಾಮಾ ಪಂಥದ ಪ್ರವರ್ತಕನಾದ ಪದ್ಮಸಂಭವ; ಆ ಪಂಥದ ಸುಧಾರಕನಾದ ಅತೀಶ; ಮಹಾಮುದ್ರಾತತ್ತ್ವವನ್ನು ನಿರೂಪಿಸಿದ ತಿಲೋಪ; ಜೀವನ್ಮುಕ್ತನಾದ ನರೋಪ; ಮಾರ್ಪ; ಅವನ

ಶಿಷ್ಯ ಮಿಲರೇಪ—ಹೀಗೆ ಉಲ್ಲೇಖ ಇದೆ. ಮಾರ್ಪನ ವರೆಗಿನ ಗುರುಗಳೆಲ್ಲ ಭಾರತೀಯ ಪಂಡಿತರು, ತಂತ್ರಶಾಸ್ತ್ರದಲ್ಲಿ ನಿಷ್ಣಾತರು, ಟಿಬೆಟ್ ದೇಶಕ್ಕೆ ವಿಶಿಷ್ಟವಾಗಿರುವ ವಜ್ರಯಾನ ಎಂಬ ಮಹಾಯಾನಪಂಥದ ಅಪಭ್ರಂಶ ಇವರ ಪ್ರಭಾವದಿಂದಲೇ ಅಲ್ಲಿ ಅಂಕುರಿಸಿದ್ದು. ಗಹನವಾದ, ಕಠೋರವಾದ ಸಾಧನೆಗಳು ಈ ಯಾನದ ವೈಶಿಷ್ಟ್ಯ. ಇಂಥ ಸಂಪ್ರದಾಯದಲ್ಲಿ ಬೆಳೆದು ಬಂದ ಮಿಲರೇಪ ಆಧ್ಯಾತ್ಮಿಕ ಪ್ರಗತಿಯಲ್ಲಿ ಮಹಾವೀರನೆಂದು ಕೀರ್ತಿತನಾಗುವ ಮುನ್ನ ಪಟ್ಟ ಬವಣೆಗಳು, ಒದಗಿಬಂದ ವಿಚಿತ್ರ ಸನ್ನಿವೇಶಗಳು, ಅವನ ಧೃತಿ-ಕ್ಷಮೆ-ಪ್ರಣಿಧಾನಗಳು ಅಲ್ಲಿಯ ಜನರ ನಡುವೆ ತಲೆತಲಾಂತರದಿಂದ, ರೋಮಾಂಚಕಾರಿಯಾದ ನಾಡಕಥೆಯಲ್ಲಿ ಉಳಿದು ಬಂದಿವೆ.

ಮಿಲರೇಪನ ಮುಖ್ಯ ಶಿಷ್ಯ ದ್ವಗ್-ಪೊ-ಲ್ಹಾರ್ಜೆ ; ಅವನ ಸತೀರ್ಥನಾದ ರೆಛುಂಗ್-ದೋರ್ಜೆ-ತಗ್ಪ ಎಂಬುವನು ತನ್ನ ಗುರುವಿನ ಚರಿತ್ರೆಯನ್ನು ವಿವರವಾಗಿ ಬರೆದಿಟ್ಟನು. ಈ ಚರಿತ್ರೆಯ ಕಡೆಯಲ್ಲಿ ರೇಛುಂಗ್ ತನ್ನನ್ನು 'ಮೂಳೆಗಳ ಮಾಲೆ ಧರಿಸಿ ಸುಡುಗಾಡಿನಲ್ಲಿ ಓಡಾಡುವವ'ನೆಂದು ಹೇಳಿಕೊಂಡಿದ್ದಾನೆ. ಇವನು ಒಮ್ಮೆ ಗೌರೀಶಂಕರ (ಲಪ್ಚಿ-ಕಂಗ್) ಶಿಖರದ ಬಳಿ ತಂಗಿದ್ದಾಗ ಈ ಚರಿತ್ರೆಯನ್ನು ಬರೆದನೆಂಬ ವಿವರವೂ ಗ್ರಂಥದಲ್ಲೇ ಇದೆ. ಟಿಬೆಟನ್ ಭಾಷೆಯಲ್ಲಿ ಇದನ್ನು 'ಜೆತ್‌ಸೂಯನ್ ಕಃಬುಂ' ಎನ್ನುತ್ತಾರೆ. ಜೆತ್‌ಸೂಯನ್ ಎಂಬುದು ಮಿಲರೇಪನ ನಿಜವಾದ ಹೆಸರು; 'ಮಿಲರೇಪ' ಎಂದರೆ 'ಹತ್ತಿಬಟ್ಟೆಯ ಮನುಷ್ಯ' ಎಂದರ್ಥ. ಟಿಬೆಟ್‌ನಂಥ ಚಳಿ ದೇಶದಲ್ಲಿ ಸರ್ವದಾ ಹತ್ತಿಬಟ್ಟೆಯ ಪಂಚೆಯನ್ನು ಹೊದೆದುಕೊಂಡು ತಿರುಗಾಡುತ್ತಿದ್ದ ಇವನನ್ನು ಕಂಡು ಅಚ್ಚರಿಗೊಂಡ ಜನ ಇಟ್ಟ ಹೆಸರದು. 'ಕಃಬುಂ' ಎಂದರೆ 'ಒಂದು ಲಕ್ಷ ಪದಗಳು',

ಅರ್ಥಾತ್ ಚರಿತ್ರೆ. ಈ ಗ್ರಂಥವನ್ನು ಸಾಮಾನ್ಯವಾಗಿ ಟಿಬೆಟನ್ ಜನ 'ಸಂ-ಥರ್' (ವಿಮುಕ್ತಿಗ್ರಂಥ) ಎಂದು ವ್ಯವಹರಿಸುತ್ತಾರೆ. ಇದರಲ್ಲಿ ಮಿಲರೇಪನ ಜೀವನ, ಸಾಧನೆ, ಸಿದ್ಧಿ, ಉಪದೇಶಗಳು ಮಾತ್ರವಲ್ಲದೆ ಕರ್‌ಗ್ಯೂಯ್‌ತ್ಪ ಎಂಬ ಸ್ಥವಿರವಾದಿಗಳ ಸಂಪ್ರದಾಯವೂ ನಿರೂಪಿತವಾಗಿದೆ. ಈ ದೃಷ್ಟಿಯಿಂದಲೂ ಗ್ರಂಥ ಅಲ್ಲಿಯವರಿಗೆ ಪೂಜ್ಯವೆನಿಸಿದೆ.

ಟಿಬೆಟನ್ ಭಾಷೆಯಲ್ಲಿದ್ದ ಈ ಗ್ರಂಥವನ್ನು ಲಾಮಾ ಕಸಿ-ದಾವಾ-ಸಂಪ್ದುಪ್ ಎಂಬ ಮುನಿ ಸುಮಾರು ಅರವತ್ತು ವರ್ಷಗಳ ಹಿಂದೆ ಹರುಕು-ಮುರುಕು ಇಂಗ್ಲೀಷಿನಲ್ಲಿ ಬಹು ಜನರ ಹಿತಕ್ಕೆಂದು ಅನುವಾದ ಮಾಡಿದರು. ಅದನ್ನು ಅವರ ಶಿಷ್ಯಕೋಟಿಗೆ ಸೇರಿದ್ದ ಇವಾನ್ಸ್-ವೆಂಟ್ಸ್ ಎಂಬ ವಿದ್ವಾಂಸರು ಈಚೆಗೆ ಪರಿಷ್ಕರಣ ಮಾಡಿದ್ದಾರೆ. ಜಾಕಿ ಬೆಕೊ ಎಂಬ ಪಂಡಿತರು ಇದನ್ನೇ ಫ್ರೆಂಚ್ ಭಾಷೆಯಲ್ಲಿ 'ಟಿಬೆಟ್ಟಿನ ಕವಿ ಮಿಲರೇಪ' ಎಂಬ ಹೆಸರಿನಿಂದ ಅನುವಾದಿಸಿ ಇಪ್ಪತ್ತೆಂಟು ವರ್ಷಗಳ ಹಿಂದೆ ಪ್ರಕಟಿಸಿದರು. ಸುಮಾರು ನೂರು ವರ್ಷಗಳಿಗೆ ಮುಂಚೆಯೇ ಯೇಷ್ಕೆ ಎಂಬ ಪಂಡಿತರು ಜರ್ಮನ್ ಭಾಷೆಯಲ್ಲಿ ಮಿಲರೇಪನ ಚರಿತ್ರೆಯನ್ನು ಸಂಗ್ರಹಿಸಿ ಪ್ರಕಟಿಸಿದರು. ಇದಾದ ಹದಿನೈದು ವರ್ಷಗಳ ನಂತರ ರಾಕ್‌ಹಿಲ್ ಅಮೇರಿಕಾದ ಪ್ರಾಚ್ಯ-ಸಂಘದ ಪತ್ರಿಕೆಯಲ್ಲಿ ಮಿಲರೇಪನಮೇಲೆ ಲೇಖನವೊಂದನ್ನು ಬರೆದರು. ಐವತ್ತು ವರ್ಷಗಳ ಹಿಂದೆ ಬೆರ್ಥೋಲ್ಡ್ ಲಾಯ್‌ಫರ್ ಬರೆದ 'ಮಿಲರೇಪನ ಕಥೆ' ಎಂಬ ಜರ್ಮನ್ ಗ್ರಂಥ ಪ್ರಸಿದ್ಧವಾಗಿದೆ. ಮಿಲರೇಪನ ಕಥೆಯ ಪ್ರಭಾವ ಚೀಣೀ, ಮಂಗೋಲಿಯನ್, ಬಂಗಾಳಿ, ಸಂಸ್ಕೃತ, ಪಾಳಿ ಭಾಷೆಗಳಿಗೂ ಹರಿಯಿತು.

ಈಗ ನಿಮ್ಮ ಮುಂದಿರುವ ಗ್ರಂಥ ಮೂಲದ ಅನುವಾದವಲ್ಲ; ಮೂಲ ಹನ್ನೆರಡು ಅಧ್ಯಾಯಗಳ ಸುದೀರ್ಘ ಗ್ರಂಥ;

ವರ್ಣನೆಯಲ್ಲಿ, ವಸ್ತು ವಿನ್ಯಾಸದಲ್ಲಿ, ಅದ್ಭುತ ಪ್ರಸಂಗಗಳ ನಿರೂಪಣೆಯಲ್ಲಿ ಮೂಲದ ಶೈಲಿ ಪುರಾಣದಂತಿದೆ. ಪ್ರಮುಖ ಪ್ರಸಂಗಗಳನ್ನು ಆಯ್ದುಕೊಂಡು ನಮ್ಮ ರುಚಿಯ ಔಚಿತ್ಯಕ್ಕೆ ಭಂಗ ತಾರದ ವಿವರಗಳನ್ನು ಮಾತ್ರ ಉಳಿಸಿಕೊಂಡು ಹೊಸ ದಾಗಿ ಹೆಣೆದ ನಿರೂಪಣೆ ಇದು; ಮಿಲರೇಪನ ವ್ಯಕ್ತಿತ್ವವನ್ನೇ ಧ್ಯಾಸದಲ್ಲಿಟ್ಟುಕೊಂಡು ಸುಖಬೋಧದ ದೃಷ್ಟಿಯಿಂದ ನಿರ್ಮಿತ ವಾದ ಸಂಗ್ರಹ. ಆಧ್ಯಾತ್ಮಿಕ ಪ್ರಪಂಚದಲ್ಲಿ ದಿಗಂತವಿಶ್ರುತ ಕೀರ್ತಿಯಾದ ಈ ಮಹಾನುಭಾವನ ಜೀವಿತದ ಪ್ರಭಾವ ಕನ್ನಡಕ್ಕೂ ಇಳಿಯಲೆಂಬ ಮನೋರಥ ಗ್ರಂಥದ ಹಿನ್ನೆಲೆ. ನನ್ನ ಉದ್ಯಮದಲ್ಲಿ ನೆರವಾದ ಗ್ರಂಥಗಳು, ಲೇಖಗಳು ಹಲವು; ಆದರೆ ಈಗ ಭಟ್ಟಿ ಇಳಿದಿರುವುದು ನನ್ನ ಸ್ಮೃತಿ-ಚಿಂತನಗಳೆರಡರ ಪಾಕ. ಈ ಕಥೆ ನಾಲ್ಕು ವರ್ಷಗಳ ಹಿಂದೆ 'ಜನಪ್ರಗತಿ'ಯಲ್ಲಿ ಅನುಕ್ರಮವಾಗಿ ಪ್ರಕಾಶವಾಯಿತು; ಆ ಸಂಕಲನ ಈಗ ಏಕತ್ರ ಉಪಲಬ್ಧವಾಗಿರುವುದು 'ಕಾವ್ಯಾಲಯ'ದ ಒಡೆಯರ ಆಸಕ್ತಿಯ ಫಲವಾಗಿ. ಈರ್ವರಿಗೂ, ಈ ಕಾರ್ಯಕ್ಕೆ ನನ್ನನ್ನು ಪ್ರೇರೇಪಿಸಿದ ಸಹೃದಯರಿಗೂ ಧನ್ಯವಾದಗಳು.

ಬೆಂಗಳೂರು
ಆಷಾಢ ಕೃಷ್ಣದ್ವಾದಶಿ
೧೩-೭-೧೯೫೮

ಎಸ್. ಕೆ. ರಾಮಚಂದ್ರರಾವ್

# ವಿಷಯಸೂಚಿಕೆ

# ಮಿಲರೇಪ

ಸುಮಾರು ೯೦೦ ವರ್ಷಗಳ ಹಿಂದಿನ ಮಾತು. ಟಿಬೆಟ್ಟಿನ ಉತ್ತರಪ್ರದೇಶದಲ್ಲಿ 'ಉರೂ' ಎಂಬ ರಾಜ್ಯವಿತ್ತು. ಅಲ್ಲಿನ ಜನ ದನ ಕುರಿ ಸಾಕಿ ಒಂದೆಡೆ ನಿಲ್ಲದೆ ಊರೂರು ತಿರುಗುವರು. ಇವರಲ್ಲಿ ಜೋಸಯ್ ಎಂಬ ಸದ್ಗೃಹಸ್ಥನೊಬ್ಬನಿದ್ದ; ಇವನು ಸುಮಾರು ಶ್ರೀಮಂತನಾಗಿದ್ದು ಮಂತ್ರತಂತ್ರಗಳಲ್ಲಿ ಚತುರ ನಾಗಿದ್ದ. ಇವನು ತೀರ್ಥಯಾತ್ರೆಯ ವ್ಯಾಜದಿಂದ ಹೊರಟು ಕ್ಸಾಂಗ್ ರಾಜ್ಯದ ಥೂಂಗ್—ವಥಿ ಎಂಬಲ್ಲಿ ಹಲವಾರು ವರ್ಷ ನೆಲಸಿದ್ದ. ಅಲ್ಲಿ ಭೂತಗಳ ಉಚ್ಚಾಟನೆಯಲ್ಲಿ, ಪೈಶಾಚ-ಸಂಬಂಧ ವಾದ ಅಪಸ್ಮಾರ ರೋಗಗಳ ಚಿಕಿತ್ಸೆಯಲ್ಲಿ ಅದ್ವಿತೀಯನೆಂದು ಖ್ಯಾತಿವೆತ್ತನು.

ಊರಿನೆಲ್ಲ ಜನರಿಗೂ ಜೋಸಯ್‌ನಲ್ಲಿ ಗಾಢವಾದ ಶ್ರದ್ಧೆ ಯಿತ್ತು; ಅವನ ವೈದ್ಯವಿದ್ಯೆಯ ಅನುಭವ ಇಲ್ಲದ ಸಂಸಾರವೇ ಇರಲಿಲ್ಲ. ಆದರೆ ಆ ಊರಿನ ಒಂದು ಸಂಸಾರ ಮಾತ್ರ ಇವನಲ್ಲಿ ನಂಬಿಕೆ ಇಟ್ಟಿರಲಿಲ್ಲ. ಒಂದು ಬಾರಿ ಆ ಮನೆಯ ಮಗಳೊಬ್ಬ ಳನ್ನು ಪ್ರಬಲವಾದ ಪಿಶಾಚಿ ಹಿಡಿಯಿತು; ಅದರ ಬಾಧೆ ದುಸ್ಸಹ ವಾಗಿ ಮನೆಯಾತ ತಿಳಿದ ಚಿಕಿತ್ಸೆಯನ್ನೆಲ್ಲ ಮಾಡಿಸಿದ, ಊರಿನ ಪ್ರಸಿದ್ಧ ಮಾಂತ್ರಿಕರನ್ನೆಲ್ಲ ಕರೆಸಿ ಪ್ರಯೋಗಮಾಡಿ ಸಿದ. ಪಿಶಾಚಿ ಯಾವುದಕ್ಕೂ ಜಗ್ಗಲಿಲ್ಲ; ಅದಕ್ಕೆ ಜೋಸಯ್ ವಿನಾ ಬೇರೆ ಯಾರ ಭೀತಿಯೂ ಇರಲಿಲ್ಲ. ಆದರೆ ಶ್ರದ್ಧೆಯಿಲ್ಲದ ಕಾರಣ ಮನೆಯಾತ ಜೋಸಯ್‌ನನ್ನು ಕರೆಸಲಿಲ್ಲ. ಎಲ್ಲ ಪ್ರಯತ್ನಗಳೂ ವಿಫಲವಾಗಿ, ಪಿಶಾಚಿಯ ಕಾಟ ಅತಿಯಾದಾಗ "ಹೋಗಲಿ, ಜೋಸಯ್‌ನನ್ನೂ ಕರೆಸಿ ನೋಡುವಾ" ಎಂದೆನಿ

ಸಿತು ಮನೆಯಾತನಿಗೆ. ಜೋಸಯ್ ಆಹ್ವಾನವನ್ನು ಮನ್ನಿಸಿ ಮನೆಗೆ ಬಂದು ಕೆಂಡ ಕಾರುವ ಕಣ್ಣುಗಳನ್ನು ತಿರುಗಿಸುತ್ತ ಭೂತಾವಿಷ್ಟೆಯ ಮುಂದೆ ನಿಂತು—"ಎಲೆ ಪಾಪಿ, ನೋಡು, ನಾನು ಜೋಸಯ್! ನಿನ್ನ ಮಾಂಸವನ್ನು ತಿಂದು ನಿನ್ನ ರಕ್ತ ವನ್ನು ಕುಡಿಯಲು ಬಂದಿದ್ದೇನೆ! ತಾಳು!" ಎಂದು ಆರ್ಭಟಿಸಿದ. ಪಿಶಾಚಿ ಹೆದರಿ ನಡುಗುತ್ತ, "ಅಮ! ಅಪ! ಮಿಲ! ಮಿಲ!" (ಎಲೆ ಮನುಷ್ಯ, ನೀನೇ ತಂದೆ, ನೀನೇ ತಾಯಿ!) ಎಂದು ಅರಚಿಕೊಂಡು ಅಲ್ಲಿಂದ ಮುಂದೆ ತಾನು ಯಾರನ್ನೂ ಹಿಂಸಿಸುವು ದಿಲ್ಲವೆಂದು ಜೋಸಯ್‌ನಿಗೆ ವಚನವಿತ್ತು ಓಡಿತು. ಈ ಪ್ರಸಂಗ ದಿಂದಾಗಿ ಜೋಸಯ್‌ನಿಗೆ "ಮಿಲ" (ಮನುಷ್ಯ) ಎಂಬ ಸಹನಾಮ ದೊರಕಿತು; ಅವನ ವಂಶಸ್ಥರಿಗೂ ಈ ಹೆಸರು ಉಳಿಯಿತು.

ಇವನ ಮಗನಿಗೆ ಇಬ್ಬರು ಮಕ್ಕಳು; ಹಿರಿಯವನು ಮಿಲ ಸೂತ್ರಸಿಂಹ, ಕಿರಿಯವನು ಮಿಲ ವಜ್ರಸಿಂಹ. ಕಿರಿಯವನು ಜೂಜುಕೋರ; ಜೂಜಿನಲ್ಲಿ ಎತ್ತಿದ ಕೈ ಅವನದು; ಯಾರಿಗೂ ಸೋತವನೇ ಅಲ್ಲ ಅವನು. ಹೀಗೆ ಅಪಾರವಾದ ಧನ ಸಂಪಾ ದಿಸಿದ. ಆದರೆ ಒಂದು ಬಾರಿ ತನಗಿಂತ ಚತುರನೊಬ್ಬನ ಸಂಗಡ ಜೂಜಾಡುತ್ತ ತನ್ನ ವಿಶಿಷ್ಟ ಆಸ್ತಿಯನ್ನೂ ಕಳೆದುಕೊಂಡು, ಭೂಮಿ-ಕಾಣಿಯನ್ನೆಲ್ಲ ಕಳೆದು, ತನ್ನ ತಂದೆಯೊಡನೆ ಮನೆಬಿಟ್ಟು ಹೊರಟು ಗುಂಗ್-ಥಂಗ್ ಪ್ರದೇಶಕ್ಕೆ ಬಂದ. ಅಲ್ಲಿ ಕ್ಯಂಗ-ತ್ಸು ಎಂಬ ಊರಿನಲ್ಲಿ ನೆಲಸಿ ಉಣ್ಣೆ ವ್ಯಾಪಾರಕ್ಕೆ ಕೈ ಹಾಕಿದ. ತಂದೆ ಶಾಸ್ತ್ರಗಳ ಅಧ್ಯಯನ-ಅಧ್ಯಾಪನ, ಮಂತ್ರವಿದ್ಯೆ, ಪೌರೋಹಿತ್ಯ ಇವುಗಳನ್ನು ಮಾಡುತ್ತ ಹೆಸರು ಪಡೆದ. ಕಾಲ ಕ್ರಮೇಣ ವಿಶೇಷವಾದ ಧನಲಾಭ ಉಂಟಾಗಿ ಊರಿಗೆಲ್ಲ ಅತಿ ಶ್ರೀಮಂತ ಸಂಸಾರವಾಯಿತು ಅವರದು. ಆ ಸ್ಥಳದ ಕನ್ಯೆ

ಯೊಬ್ಬಳನ್ನು ವರಿಸಿ ವಜ್ರಸಿಂಹ ಅವಳಿಂದ ಮಿಲ ಜ್ಞಾನಸಮುದ್ರ ಎಂಬ ಮಗನನ್ನು ಪಡೆದ. ಊರಿನ ಅಂಚಿನಲ್ಲಿ ವಿಶಾಲವಾದ ಭೂಮಿಯನ್ನು ಕೊಂಡು ಅಲ್ಲಿ ದೊಡ್ಡ ಮನೆಯನ್ನು ಕಟ್ಟಿ ಕೊಂಡ. ಹುಡುಗ ಇಪ್ಪತ್ತರ ಪ್ರಾಯ ಮುಟ್ಟಿದಾಗ ಅಲ್ಲಿನ ರಾಜವಂಶದ ಕನ್ಯೆಯಾದ ಶ್ವೇತಮಾಲೆ ಎಂಬವಳನ್ನು ಅವನಿಗೆ ತಂದುಕೊಂಡು ವಿವಾಹ ಮಂಗಲ ನಡೆಯಿತು. ಇವರಿಗಾಗಿ ವಜ್ರಸಿಂಹ ಮತ್ತೊಂದು ವಿಶಾಲ ಭವನವನ್ನು ಕಟ್ಟಿಸಿಕೊಟ್ಟ.

ವಜ್ರಸಿಂಹ ಹೀಗೆ ಶ್ರೀಮಂತನಾದುದನ್ನು ಕೇಳಿ ಅವನ ದೂರದ ನಂಟರೆಲ್ಲ ಹತ್ತಿರ ಬಂದರು; ಅವನ ಆಶ್ರಯವನ್ನು ಬೇಡಿ ಅಲ್ಲಿಯೇ ಅಲ್ಲಲ್ಲಿ ನೆಲಸಿದರು. ಅವರೂ ವ್ಯಾಪಾರದ ಹಾದಿ ಹಿಡಿದು ಧನಾರ್ಜನೆ ಮಾಡಿದರು.

ಹೀಗಿರುವಲ್ಲಿ ಶ್ವೇತಮಾಲೆ ಸುಮಾರು ಕ್ರಿಸ್ತಾಬ್ದ ೧೦೫೨ ರ ಚೈತ್ರದಲ್ಲಿ ಒಂದು ಗಂಡು ಮಗುವನ್ನು ಹೆತ್ತಳು. ಆಗ ವಜ್ರ ಸಿಂಹ ತನ್ನ ವ್ಯಾಪಾರದ ಯಾತ್ರೆಯಿಂದ ತಕ್ತ್ಸಿ ಪರ್ವತಗಳ ಮೇಲಿದ್ದ; ಮಗುವಾದ ಸುದ್ದಿ ಮುಟ್ಟುತ್ತಲೇ 'ಸುಶ್ರಾವ್ಯ ವಾದ ಸುದ್ದಿ' ಎಂದು ಉದ್ಗಾರ ಎಳೆದ. ಈ ಕಾರಣದಿಂದ ಮಗುವಿಗೆ 'ಸುಶ್ರಾವ್ಯ' (ಟಿಬೆಟನ್ ಭಾಷೆಯಲ್ಲಿ ಥೊಯ್-ಪ-ಗ) ಎಂಬ ನಾಮಕರಣ ಆಯಿತು. ಸುಂದರನಾಗಿ ದೃಢಾಂಗ ನಾಗಿ ಬೆಳೆಯುತ್ತ ಬಂದ ಮಗುವಿನ ಧ್ವನಿ ಕೂಡ ಸುಶ್ರಾವ್ಯ ವಾಗಿಯೇ ಇತ್ತು. ಸುಶ್ರಾವ್ಯ ನಾಲ್ಕು ವರ್ಷದವನಿದ್ದಾಗ ಶ್ವೇತಮಾಲೆ ಒಂದು ಹೆಣ್ಣು ಮಗುವನ್ನು ಹೆತ್ತಳು. ಈ ಮಗುವಿಗೆ ಭಾಗ್ಯರಕ್ಷಕಿ (ಗೊಯ್ನ್-ಮ-ಕ್ಯಿಟ್) ಎಂಬ ಹೆಸರಿಟ್ಟರು. ಶ್ರೀಮಂತರ ಮಕ್ಕಳಾದ ಇವರಿಬ್ಬರೂ ರಾಜ ಭೋಗದಲ್ಲೇ ಬೆಳೆದರು; ಬೇಕಾದ ಆಭರಣ ತೊಟ್ಟು ಶೃಂಗಾರ ಮೂರ್ತಿಗಳಾಗಿ ಊರಜನರೆಲ್ಲರ ಆದರವನ್ನು ಸೂರಿದರು.

ಉಳಿದೆಲ್ಲ ಜನರೂ ವಜ್ರಸಿಂಹನ ಸಂಸಾರದ ನೆರವಿನಲ್ಲಿ ನಿಂತವರಾದ್ದರಿಂದ ಈ ಮಕ್ಕಳಿಗೆ ವಿಶೇಷ ಪುರಸ್ಕಾರ ದೊರೆಯುತ್ತಿತ್ತು.

ಸುಶ್ರಾವ್ಯ—ಪ್ರೀತಿಗೆ ಇವನನ್ನು ಮಿಲರೇಪ ಎಂದು ಕರೆಯುತ್ತಿದ್ದರು—ಏಳು ವರ್ಷದವನಿದ್ದಾಗ ಅವನ ತಂದೆ ವಜ್ರಸಿಂಹ ತೀವ್ರವಾದ ಬೇನೆಗೆ ತುತ್ತಾಗಿ ತೀರಿಕೊಂಡನು; ಸಾಯುವ ಮುನ್ನ ನಂಟರಿಷ್ಟರೆಲ್ಲ ನೆರೆದು ನಿಂತಾಗ ಅವರೆದುರು ತನ್ನ ಹೆಂಡತಿ ಮಕ್ಕಳ ಸಂರಕ್ಷಣೆಗೂ, ತನ್ನ ಮಗ ಪ್ರಾಪ್ತ ವಯಸ್ಕನಾಗುವವರೆಗೆ ತನ್ನ ಅಪರಿಮಿತ ಆಸ್ತಿಯ ಮೇಲ್ವಿಚಾರಣೆಗೂ ತನ್ನ ಅಣ್ಣ ಸೂತ್ರಸಿಂಹನ ಹೆಸರನ್ನು ಸೂಚಿಸಿದನು. ವಜ್ರಸಿಂಹನ ಅಪರ ಕರ್ಮಗಳೆಲ್ಲ ಮುಗಿದಂದು ಅವನ ಉಳಿದ ನಂಟರೆಲ್ಲ ಸೇರಿ "ಶ್ವೇತಮಾಲೆಯ ಹೆಸರಿನಲ್ಲೇ ವಜ್ರಸಿಂಹನ ಆಸ್ತಿಯೆಲ್ಲ ಇರಲಿ; ಅವಳು ಬಯಸುವ ಸಹಾಯವನ್ನು ನಾವು ಮಾಡುವಾ" ಎಂದರು. ಆಗ ಸೂತ್ರಸಿಂಹ—"ಅದಾಗದು. ವಜ್ರಸಿಂಹನ ಸಮೀಪ ಸಂಬಂಧಿ ನಾನು. ಶ್ವೇತಮಾಲೆ ಮತ್ತು ಅವಳ ಮಕ್ಕಳ ಸಂರಕ್ಷಣೆ ನನ್ನ ಕರ್ತವ್ಯ; ಅವನ ಆಸ್ತಿಯ ಮೇಲ್ವಿಚಾರಣೆಯನ್ನೂ ನಾನೇ ನೋಡಿಕೊಳ್ಳುತ್ತೇನೆ" ಎಂದು ಹೇಳಿ ಶ್ವೇತಮಾಲೆ ಮತ್ತು ಮಕ್ಕಳನ್ನು ತನ್ನ ಮನೆಗೇ ಕರೆದೊಯ್ದು ಆಸ್ತಿಯ ವಹಿವಾಟನ್ನೆಲ್ಲ ತಾನೇ ವಹಿಸಿಕೊಂಡ.

ಸೂತ್ರಸಿಂಹ ದುಷ್ಟಸ್ವಭಾವದವನು; ಅವನ ಹೆಂಡತಿಯೋ ಮನುಷ್ಯರೂಪದ ಸಿಂಹಿಣಿ. ವಜ್ರಸಿಂಹನ ಆಸ್ತಿಯು ವಿವಿಧ ವಸ್ತುಗಳು ಇವರಿಬ್ಬರ ಪಾಲಾದುವು. ಶ್ವೇತಮಾಲೆ ಮತ್ತು ಅವಳ ಮಕ್ಕಳ ಪರಿಸ್ಥಿತಿ ಶೋಚನೀಯವಾಯಿತು; ಅವರಿಗೆ ಎಳ್ಳಷ್ಟೂ ಸ್ವಾತಂತ್ರ್ಯ ಇರದೆ, ಉಟ್ಟ ಬಟ್ಟೆಯೆಲ್ಲ ಚಿಂದಿ ಚಿಂದಿಯಾಗಿ, ಪುಷ್ಟಿಯಾದ ಆಹಾರ ದುರ್ಲಭವಾಗಿ, ಮನೆಯ ಊಳಿಗ ದುರ್ಭರವಾಗಿ, ಕ್ಷಯಿಸಿ ಕಂಗಾಲಾದರು.

ಊರ್ಜಿತ ಸ್ಥಿತಿಯಲ್ಲಿ ಅವರನ್ನು ನೋಡಿದ್ದವರೆಲ್ಲ ಅವರ ಇಂದಿನ ಸ್ಥಿತಿಯನ್ನು ನೋಡಿ ಮರುಗಿದರು. ಆದರೆ ಅವರಿಗೆ ಸಹಾಯಮಾಡುವ ಸ್ಥಿತಿಯಲ್ಲಿ ಯಾರೂ ಇರಲಿಲ್ಲ. ಹಿಂದೆ ಅವರ ಉಪಕಾರದ ಆಸರೆಯಲ್ಲಿ ಬೆಳೆದವರೂ ಇಂದು ಅವರಿಂದ ದೂರಾದರು. ನಿರ್ಗತಿಕರಾದ ಅವರನ್ನು ಕಂಡು ಹಳಿದವರೆಷ್ಟೋ ಮಂದಿ! ಶ್ವೇತಮಾಲೆಯ ತಮ್ಮನೊಬ್ಬ ಮಾತ್ರ ಆಗಾಗ ಅವರಿಗೆ ಸಹಾಯ ಮಾಡುತ್ತಿದ್ದ; ಅವನ ಮಗಳು ಜೆಸಯ್‌ಳನ್ನು ಮಿಲರೇಪನಿಗೆ ಕೊಡುವುದೆಂದು ವಜ್ರಸಿಂಹ ಬದುಕಿದ್ದಾಗಲೇ ನಿಶ್ಚಿತವಾಗಿತ್ತು. "ಭಾಗ್ಯಚಕ್ರ ಹೀಗೆಯೇ ಇರದು; ಮತ್ತೆ ಉಚ್ಛ್ರಾಯ ಸ್ಥಿತಿ ಬಂದೇ ಬರುವುದು" ಎಂದು ಅವನು ಸಮಾಧಾನ ಹೇಳುತ್ತಿದ್ದ.

ಮಿಲರೇಪ ಹದಿನೈದರ ಪ್ರಾಯ ಮುಟ್ಟಿದ. ಶ್ವೇತಮಾಲೆಗೆ ಬಳುವಳಿಯಿಂದ ಬಂದ ಸಣ್ಣ ಭೂಮಿಯೊಂದಿತ್ತು; ಅಲ್ಲಿ ಬೆಳೆದುದನ್ನು ಮಾರಿ ಬಂದ ಧನವನ್ನು ಅವಳ ತಮ್ಮ ಅವಳಿಗಾಗಿ ಕೂಡಿಸಿಟ್ಟಿದ್ದ. ಅದರ ಆಧಾರದ ಮೇಲೆ ಒಂದು ದಿನ ಶ್ವೇತ ಮಾಲೆ ಊರಜನರನ್ನೆಲ್ಲ ಔತಣಕೂಟವೊಂದಕ್ಕೆ ಕರೆದಳು; ತನ್ನ ಗಂಡ ತೀರಿಕೊಂಡಾಗ ನೆರೆದಿದ್ದವರೆಲ್ಲ ಆಹೂತರಾಗಿದ್ದರು. ಅಲ್ಲಿಂದ ಇಲ್ಲಿಂದ ಜಮಖಾನೆಗಳನ್ನು ಎರವು ತಂದು ಹಾಸಿ ರುಚಿ ರುಚಿಯಾದ ಭಕ್ಷ್ಯಭೋಜ್ಯಗಳನ್ನು ಮಾಡಿ ಪಾನೀಯಗಳನ್ನು ಸಿದ್ಧಪಡಿಸಿದ್ದಳು. ಔತಣ ಮುಗಿದಮೇಲೆ ಅತಿಥಿಗಳ ಸಭೆಯಲ್ಲಿ ಶ್ವೇತಮಾಲೆ ಎದ್ದು, "ಮಾನ್ಯರೇ, ಈ ಔತಣದ ಸಂದರ್ಭ ವಜ್ರ ಸಿಂಹನ ಮಗ ಮಿಲರೇಪ ಪ್ರಾಪ್ತವಯಸ್ಕನಾಗಿರುವುದು. ಈ ಸಂದರ್ಭದಲ್ಲೇ ವಜ್ರಸಿಂಹನ ಆಶಯದಂತೆ ಇದುವರೆಗೆ ಅವನ ಅಣ್ಣನ ಸ್ವಾಧೀನದಲ್ಲಿದ್ದ ನಮ್ಮ ಆಸ್ತಿಯನ್ನು ವಜ್ರಸಿಂಹನ ಆಶಯದಂತೆಯೇ ನಾವು ಪುನಃ ಸ್ವೀಕಾರಮಾಡಲು ತಮ್ಮೆಲ್ಲರ

ಸಮ್ಮತಿಯನ್ನು ಬೇಡುತ್ತೇವೆ. ವಜ್ರಸಿಂಹ ಗತಿಸಿದಂದು ಸಮ್ಮುಖದಲ್ಲಿದ್ದ ತಾವೆಲ್ಲರೂ ಅವನ ಕಡೆಯ ಮಾತುಗಳನ್ನು ಕೇಳಿದ್ದೀರಿ. ಇದುವರೆಗೆ ವಜ್ರಸಿಂಹನ ಅಣ್ಣ ನಮ್ಮನ್ನು ಆದರದಿಂದ, ಔದಾರ್ಯದಿಂದ ಸಲಹಿದ್ದಾನೆ; ನಮ್ಮ ಸ್ವತ್ತನ್ನು ನಿಷ್ಠೆಯಿಂದ ಕಾಪಿಟ್ಟಿದ್ದಾನೆ. ಈ ಉಪಕಾರಕ್ಕೆ ನಾವು ಆಭಾರಿಗಳು. ಆದರೆ ನನ್ನ ಮಗ ಮಿಲರೇಪ ಈಗ ಹರೆಯ ಮುಟ್ಟಿದ್ದಾನೆ; ಅವನಿಗೆ ಸಂಸಾರ ನಿರ್ವಹಣೆಯ ಸಾಮರ್ಥ್ಯ ಬಂದಿದೆ. ಅದು ಕಾರಣ ನಮ್ಮ ಆಸ್ತಿಯನ್ನು ಅವನ ಹೆಸರಿನಲ್ಲಿ ನಿಲ್ಲಿಸಿ, ಅವನಿಗೆ ಜೆಸಯ್‌ಳನ್ನು ಮದುವೆ ಮಾಡಿಕೊಟ್ಟು ನಮ್ಮ ಮನೆಯನ್ನು ಉದ್ಧಾರಮಾಡುವ ಭಾರ ನಿಮ್ಮದು" ಎಂದು ಹೇಳಿದಳು.

ಈ ಮಾತನ್ನು ಕೇಳಿ ಸಭೆಯಲ್ಲಿದ್ದ ಸೂತ್ರಸಿಂಹ ಮತ್ತು ಅವನ ಹೆಂಡತಿ ಎದ್ದು ಇಬ್ಬರೂ ಒಕ್ಕೊರಲಿನಿಂದ—"ಇದು ಏನು ಮಾತು! ವಜ್ರಸಿಂಹನ ಆಸ್ತಿ ಎಂದರೇನು ? ಎಲ್ಲಿತ್ತು ? ಅವನು ಬದುಕಿದ್ದಾಗ ಇದ್ದ ಆಸ್ತಿ, ಆಭರಣ, ಸಲಕರಣೆ ಎಲ್ಲ ನಮ್ಮಿಂದಲೇ ಎರವಾಗಿ ಕೊಂಡಿದ್ದ. ಅವನು ಸತ್ತಮೇಲೆ ನ್ಯಾಯವಾಗಿಯೇ ಅದು ನಮಗೆ ಬಂತು. ಸಾಲವಾಗಿ ಕೊಂಡದ್ದನ್ನು ಸ್ವಾರ್ಜಿತಸ್ವತ್ತು ಎನ್ನುವ ಈ ಸಾಹಸ ಅತಿ ಸೋಜಿಗ! ಕೃತಘ್ನರನ್ನು ಕಾಪಾಡಿದರೆ ಫಲ ಇದು!" ಎಂದು ಆರ್ಭಟಿಸಿ, "ನಿಜದಲ್ಲಿ ನೋಡಿದರೆ ಈ ಮನೆಯೂ ನಿಮ್ಮದಲ್ಲ, ಇಲ್ಲಿರಲು ನಿಮಗೆ ಯೋಗ್ಯತೆಯೂ ಇಲ್ಲ!" ಎಂದು ಶ್ವೇತ ಮಾಲೆ ಮತ್ತು ಅವಳ ಮಕ್ಕಳನ್ನು ಬಯ್ದು ಹೊಡೆದು ಹೊರ ದೂಡಿಬಿಟ್ಟರು.

ಪರಿಭವದ ಸಂಕಟದಿಂದ ಶ್ವೇತಮಾಲೆ ನಿಶ್ಚೇಷ್ಟಳಾಗಿ ಸ್ಮೃತಿ ತಪ್ಪಿ ಬಿದ್ದಳು; ಮಿಲರೇಪ, ಭಾಗ್ಯರಕ್ಷಕಿ ಎದೆಯೊಡೆದು ಅಳಲು

ಮೊದಲಿಟ್ಟರು. ಸೂತ್ರಸಿಂಹ ಇಂದು ಶ್ರೀಮಂತ; ಊರ ಜನರಿಗೆ ಅವನ ಕೃಪಾದೃಷ್ಟಿಯಿಂದ ಪ್ರಯೋಜನವುಂಟು. ಅದು ಕಾರಣ ಅವನಿಗೆ ವಿರುದ್ಧವಾಗಿ ಶ್ವೇತಮಾಲೆಯ ಪಕ್ಷ ಹಿಡಿದು ಮಾತನಾಡುವ ಸಾಹಸ ಯಾರೂ ಮಾಡಲಿಲ್ಲ. ಆದರೆ ಶ್ವೇತ ಮಾಲೆಗಾದ ಅನ್ಯಾಯ, ಸೂತ್ರಸಿಂಹನ ಭಂಡತನ ಎಲ್ಲರಿಗೂ ಮನದಟ್ಟಾಗಿತ್ತು. ಶ್ವೇತಮಾಲೆ ಸಂಜ್ಞೆ ತಿಳಿದು ಎದ್ದಾಗ ಸೂತ್ರಸಿಂಹ "ನಿಮ್ಮದೆಂಬುದು ನನ್ನ ಬಳಿ ಏನೂ ಇಲ್ಲ! ಇದ್ದರೂ ನಿಮಗದು ದಕ್ಕದು! ಶಕ್ತಿಯಿದ್ದರೆ ಹಗರಣಮಾಡಿ, ಇಲ್ಲವೆಂದರೆ ಶಾಪವಿಡಿ. ನಾನೇನು ಸೋಲುವ ಕುಳ ಅಲ್ಲ!" ಎಂದು ಆರ್ಭಟಿಸಿದ.

ಸಂದರ್ಭದ ಬಿಸಿ ಆರಿದಮೇಲೆ, ಶ್ವೇತಮಾಲೆಯ ಮೇಲೆ ಅನುಕಂಪ ಇದ್ದ ಮಂದಿ "ಏಳಮ್ಮ, ಅತ್ತೇನು ಪ್ರಯೋಜನ? ನಾವೆಲ್ಲ ಕೈಲಾದ ಸಹಾಯಮಾಡಿ ನಿಮ್ಮಗಳ ಜೀವನಯಾತ್ರೆ ನಡಸುವೆವು. ನಿಮ್ಮ ಮಗನನ್ನು ಎಲ್ಲಿಯಾದರೂ ವಿದ್ಯಾ ಪೀಠಕ್ಕೆ ಕಳಿಸಿ ಪಂಡಿತನನ್ನಾಗಿ ಮಾಡುವ. ಅವನು ಪ್ರವರ್ಧ ಮಾನನಾದರೆ ಸೂತ್ರಸಿಂಹನನ್ನು ನಾಚಿಸಬಲ್ಲ," ಎಂದು ಸಂತೈಸಿದರು. ಶ್ವೇತಮಾಲೆ ಧರ್ಮಜೀವನಕ್ಕೆ ಒಪ್ಪದೆ ತನ್ನ ಬಳುವಳಿಯ ಭೂಮಿಯನ್ನು ತಾನೇ ಉತ್ತು ಬೆಳೆತಂದು ಬದುಕುವ ನಿರ್ಧಾರ ಮಾಡಿದಳು; ಮಗ ಮಿಲರೇಪನನ್ನು ತ್ಸ ರಾಜ್ಯದ ವಿಥಾಂಗ್-ಗಟ್-ಖ (ಅಂದರೆ 'ದುರ್ದರ್ಶ ಘಂಟಾ ನಾದ') ಎಂಬ ನಗರಿಯಲ್ಲಿದ್ದ ನಾಗಾಷ್ಟಕನೆಂಬ ಲಾಮನ ಬಳಿ ಯಲ್ಲಿ ವಿದ್ಯಾಭ್ಯಾಸಕ್ಕೆ ಕಳುಹಿಸಿದಳು. ಶ್ವೇತಮಾಲೆ ದಿನವೂ ತನ್ನ ಭೂಮಿಯಲ್ಲಿ ಕೆಲಸ ಮಾಡುವುದಲ್ಲದೆ ತನ್ನ ತಮ್ಮ ಕೊಡುತ್ತಿದ್ದ ಉಣ್ಣೆಯನ್ನು ನೂತು ಬಟ್ಟೆ ಮಾಡುತ್ತಿದ್ದಳು; ಅದನ್ನು ಆತ ಮಾರುಕಟ್ಟೆಗೆ ಕೊಂಡೊಯ್ದು ಮಾರಿಕೊಡುತ್ತಿದ್ದ. ಮಗಳು

ಭಾಗ್ಯರಕ್ಷಿ ಅಕ್ಕಪಕ್ಕದವರ ಮನೆಗೆಲಸ ಮಾಡಿಕೊಡುತ್ತಿದ್ದಳು. ಇಷ್ಟು ಕಷ್ಟಪಟ್ಟು ದುಡಿದರೂ ಸಿಗುತ್ತಿದ್ದುದು ಕೊಳಕು ಆಹಾರ, ಉಡುತ್ತಿದ್ದುದು ಜೂಲುಬಟ್ಟೆ! ಎಂಥ ಶ್ರೀಮಂತ ಸಂಸಾರಕ್ಕೆ ಎಂಥ ದುರ್ದಶೆ! ಇದನ್ನು ಕಂಡು ಎಳೆವಯಸ್ಸಿನ ಮಿಲರೇಪ ಅಳುತ್ತಿದ್ದ. ಚಿಕ್ಕಂದಿನಲ್ಲೇ ಆದ ಈ ದುಃಖ ದರ್ಶನ, ದೌರ್ಮನಸ್ಯದ ಅನುಭವ, ಅವನ ಮನಸ್ಸಿನ ಮೇಲೆ ಆಳವಾದ ಮುದ್ರೆ ಒತ್ತಿತು.

# ಮಿಲರೇಪನ ಮಂತ್ರಸಿದ್ಧಿ

ಮಿಲರೇಪ ಹೇಗೋ ತನ್ನ ಅಧ್ಯಯನ ಕಾರ್ಯ ನಡೆಸು ತ್ತಿದ್ದ. ಒಮ್ಮೆ ಅವನ ಗುರು ನಾಗಾಷ್ಟಕನನ್ನು ಔತಣ ಸಮಾರಂಭವೊಂದಕ್ಕೆ ಅಗ್ರಾತಿಥಿಯಾಗಿ ಆಹ್ವಾನಿಸಿದ್ದರು; ಔತಣ ಇದ್ದದ್ದು ತನ್ನ ನಗರಕ್ಕೆ ತುಸುದೂರದಲ್ಲಿ. ಟಿಬೆಟನ್ ಜನರಲ್ಲಿ ಕುಡಿಯುವ ಪದ್ಧತಿ ಉಂಟು. ಲಾಮಾಗಳೂ ಸಂನ್ಯಾಸಿ ಗಳೂ ಎಲ್ಲರೂ ಔತಣ ಕಾಲದಲ್ಲಿ ಕುಡಿಯುತ್ತಾರೆ. ನೆರೆದವರ ಬಲಾತ್ಕಾರದಿಂದ ಗುರು ಮಿತಿಮೀರಿ ಕುಡಿದು ಪ್ರಜ್ಞೆ ತಪ್ಪಿದ. ಸಮಾರಂಭದಲ್ಲಿ ಅವನಿಗೆ ದೊರೆತ ಸಂಭಾವನೆ-ದಕ್ಷಿಣೆಗಳನ್ನೆಲ್ಲ ಶಿಷ್ಯ ಮಿಲರೇಪನ ಕೈಲಿ ಕೊಟ್ಟು ಮಠಕ್ಕೆ ಕಳುಹಿಸಿದರು. ಮಿಲರೇಪನೂ ಸ್ವಲ್ಪ ಕುಡಿದಿದ್ದ; ಮನಸ್ಸು ಹಗುರವಾಗಿ ಸಂತೋಷದ ಭಾಸ ಮನಸ್ಸನ್ನು ತೇಲಿಸುತ್ತಿತ್ತು. ಅವನಿಗೆ ನಿಜ ದಲ್ಲಿ ಇದ್ದ ಕಂಠಶ್ರೀಯ ವಿಚಾರವಾಗಿ ವಿಶೇಷ ಅಭಿಮಾನವಿತ್ತು; ಸರಿ, ಮದ್ಯದ ಆವೇಶದಲ್ಲಿ ನಡೆಯುತ್ತ ಗಟ್ಟಿಯಾಗಿ ಹಾಡು ಹೇಳುತ್ತ ಹೊರಟ. ಮಠದ ದಾರಿಯಲ್ಲೇ ತನ್ನ ಮನೆಯಿತ್ತು; ಮನೆಯೊಳಗೆ ನಿತ್ಯದುಃಖದ ದುಗುಡದಲ್ಲಿ ಕುದಿಯುತ್ತ ಶ್ವೇತ ಮಾಲೆ ರೊಟ್ಟಿ ತಟ್ಟುತ್ತ ಕೂತಿದ್ದಳು; ತನ್ನ ಗಂಡ ಸತ್ತ ದಿನ ದಿಂದ ಅವಳ ಕಣ್ಣೀರು ಇಂಗಿಯೇ ಇರಲಿಲ್ಲ! ದಾರಿಯುದ್ದಕ್ಕೂ ಸುಖದಲ್ಲಿ ಹಾಡುತ್ತ ನರಿಯುತ್ತಿದ್ದ ಧ್ವನಿ ಕೇಳಿ ಬೆಚ್ಚಿ, "ಇದೇನು ಮಿಲರೇಪನ ಧ್ವನಿ! ಇಲ್ಲ, ಇಲ್ಲ! ನಮ್ಮಂಥ ಆರ್ತರೇ ಭುವಿಯಲ್ಲಿಲ್ಲ; ಮಿಲರೇಪ ಸುಖಗೀತೆ ಹಾಡುವುದೆಂದರೇನು? ನನ್ನ ಚಿತ್ತ ಭ್ರಮಿಸುತ್ತಿದೆ" ಎಂದುಕೊಂಡಳಾದರೂ ಕುತೂ ಹಲಾವಿಷ್ಟೆಯಾಗಿ ಹೊರಗೆ ಬಂದಳು. ಸುರೆಯ ಮದದಲ್ಲಿ

ಸುಖವಾಗಿದ್ದ ಮಿಲರೇಪನನ್ನು ಕಂಡೊಡನೆ "ಓ ವಜ್ರಸಿಂಹ, ಎಂಥ ನೀಚ ನಿನ್ನ ಮಗನಾಗಿ ಹುಟ್ಟಿದ್ದಾನೆ! ನಮ್ಮ ಸ್ಥಿತಿ ನೋಡು! ಇವನ ಸಂತೋಷ ನೋಡು! ಈ ಚಂಡಾಲನ ಮೈಯಲ್ಲಿ ನಿನ್ನ ರಕ್ತ ಹರಿಯುವುದೇ!" ಎಂದು ಪ್ರಲಪಿಸುತ್ತ ಬಾಗಿಲಲ್ಲಿದ್ದ ಬೂದಿಯನ್ನು ಅವನ ಮುಖದ ಮೇಲೆ ಎರಚಿ ಕಟ್ಟಿಗೆಯಿಂದ ಅವನನ್ನು ಹೊಡೆದು ಮೂರ್ಛೆಬಿದ್ದಳು. ಇದರಿಂದ ಮಿಲರೇಪನ ಮದ್ಯದ ಆವೇಗ ಇಳಿಯಿತು. ಪರಿಸ್ಥಿತಿಯ ಅರಿವಾಗಿ ತಾನೂ ಅಳಲು ಮೊದಲಿಟ್ಟ. ಸ್ವಲ್ಪ ಹೊತ್ತಿನಮೇಲೆ ಶ್ವೇತಮಾಲೆ ಸಂಜ್ಞೆ ತಿಳಿದೆದ್ದು ಅವನನ್ನೇ ದಿಟ್ಟಿಸಿ ನೋಡುತ್ತ "ಮಗನೇ, ನಮ್ಮ ದುಃಖದಲ್ಲಿ ನಿನಗೇನು ಸಂತೋಷ! ಇರುವ ಜೀವಿಗಳಲ್ಲೆಲ್ಲ ಅತಿ ದುಃಖಾತ್ಮರೆಂದರೆ ನಾವು. ನಾನು ಅಳುವಾಗ ನಿನಗೆ ನಗು ಹೇಗೆ ಬಂದೀತು?" ಎಂದು ಮುಂತಾಗಿ ಹಳಿದಳು. ಮಿಲರೇಪ ಅಳುತ್ತ "ಅಮ್ಮ, ಅಜ್ಞಾನದಲ್ಲಿ ಸ್ತಿಮಿತ ತಪ್ಪಿದೆ, ಕ್ಷಮಿಸು. ಇನ್ನೆಂದೂ ಇಂಥ ಅಪರಾಧ ಮಾಡೆನು, ಈಗ ನಿನ್ನ ಬಯಕೆ ಏನು, ಹೇಳು; ನೀನು ಹೇಳಿದುದನ್ನು ಮಾಡುವೆ," ಎಂದ.

ಶ್ವೇತಮಾಲೆ, "ನನ್ನ ಬಯಕೆ, ನೀನು ನಮ್ಮ ವಿರೋಧಿಗಳನ್ನು ನಾಶಮಾಡಬೇಕೆಂಬುದು. ಬಾಹುಬಲದಿಂದ, ಸೇನೆಯ ಸಹಾಯದಿಂದ ಅದನ್ನು ಮಾಡುವ ಯೋಗ್ಯತೆ ನಿನಗಿಲ್ಲ. ಅದು ಕಾರಣ, ಇಂದ್ರಜಾಲ ವಿದ್ಯೆಯನ್ನು ಸಾಂಗವಾಗಿ ಕಲಿತು ಅದನ್ನು ಸೂತ್ರಸಿಂಹನ ಮೇಲೆ ಪ್ರಯೋಗಿಸಿ, ಒಂಬತ್ತನೆಯ ತಲೆಯವರೆಗೆ ಅವನ ವಂಶ ನಾಶವಾಗುವಂತೆ ಮಾಡು. ಆಗ ನನಗೆ ಸಮಾಧಾನವಾದೀತು!" ಎಂದಳು. ಈ ಬಯಕೆಯನ್ನು ಈಡೇರಿಸಲು ಮಿಲರೇಪ ಒಪ್ಪಿದ. ಆದರೆ ಅದಕ್ಕೆ ಯೋಗ್ಯನಾದ ಗುರುವಿನ ಬಳಿ ಹೋಗಬೇಡವೇ? ಅವನಿಗೆ

ಗುರುದಕ್ಷಿಣೆ ಕೊಡಬೇಡವೇ? ಅದಕ್ಕೆ ಧನ ಎಲ್ಲಿದೆ? ಶ್ವೇತಮಾಲೆಯ ಹಠ ಈ ಸಂದಿಗ್ಧಕ್ಕೆ ಮಣಿಯಲಿಲ್ಲ. ತನ್ನ ಬಳುವಳಿಯ ಭೂಮಿಯಲ್ಲಿ ಅರ್ಧ ಮಾರಿ ಮಿಲರೇಪನ ಪ್ರಯಾಣಕ್ಕೆ ಒಂದು ಕುದುರೆಯನ್ನು ಕೊಂಡಳು; ಇದ್ದಬದ್ದ ವಸ್ತುಗಳಲ್ಲಿ ಕೆಲವನ್ನು ಮಾರಿ ಅವನ ಮಾರ್ಗ ಸಾಮಗ್ರಿಯನ್ನು ಒದಗಿಸಿದಳು; ಗುರುದಕ್ಷಿಣೆಗಾಗಿ ಬೆಲೆಬಾಳುವ ಕಂಠೀಹಾರವನ್ನೂ ಹವಣಿಸಿದಳು.

ಅದೇ ಸ್ಥಳದಿಂದ ಅಧ್ಯಯನಕ್ಕೆಂದು ಹೊರಟ ನಾಲ್ಕೈದು ಮಂದಿ ತರುಣರಿದ್ದರು; ಮಿಲರೇಪ ಇವರನ್ನು ಸೇರಿದ. ಅವರೂ ಕೀರ್ತಿಗಾಗಿ ಇಂದ್ರಜಾಲ ವಿದ್ಯೆಯನ್ನೇ ಕಲಿಯಲು ಹೊರಟಿದ್ದರು. ಶ್ವೇತಮಾಲೆಗೆ ಧೈರ್ಯವಾಯಿತು. ಅವರ ಮೇಲ್ವಿಚಾರಣೆಯಲ್ಲಿ ತನ್ನ ಮಗನನ್ನು ಬಿಟ್ಟು ಅವನಿಗೆ ವಿಶಿಷ್ಟ ಬುದ್ಧಿವಾದವನ್ನೂ ಹೇಳಿ ಅವರೊಂದಿಗೆ ಸ್ವಲ್ಪ ದೂರ ಬಂದು ಬೀಳ್ಕೊಟ್ಟು ಹಿಂದಿರುಗಿದಳು. ಹೋಗುವಾಗ ಮಿಲರೇಪನಿಗೆ, "ಮಗು, ಅಧ್ಯಯನದಲ್ಲಿ ತದೇಕಧ್ಯಾನ ಇರಲಿ. ನಮ್ಮ ದುಃಸ್ಥಿತಿಯನ್ನು ಮರೆಯದಿರು; ಈ ಸ್ಥಳದಲ್ಲಿ ನಮ್ಮ ವಿರೋಧಿಗಳಿಗೆ ಅಹಿತ ಸಾಧಿಸಿ ನಮ್ಮ ಶಕ್ತಿ ಪ್ರದರ್ಶನಮಾಡಬೇಕು. ಈ ನಿನ್ನ ಸಂಗಾತಿಗಳಿಗೆ ಇಂದ್ರಜಾಲ ಕೀರ್ತಿಸಾಧಕ ಮಾತ್ರ; ನಮಗೆ ಅದು ಅತ್ಯಾವಶ್ಯಕ. ನೀನು ಸೂತ್ರಸಿಂಹನಿಗೆ ಕೆಡುಕು ಮಾಡುವ ಶಕ್ತಿ ಪಡೆದು ಬರದಿದ್ದರೆ ನಿನ್ನೆದುರಿನಲ್ಲೇ ಆತ್ಮಹತ್ಯೆ ಮಾಡಿಕೊಳ್ಳುವೆ, ನೆನಪಿರಲಿ!" ಎಂದಳು. ಹಿಂದಿರುಗುತ್ತ ಮಗನ ವಿರಹವನ್ನು ಸಹಿಸಲಾರದೆ ಆತ್ಮೀಯಾಗಿ ಅಳುತ್ತ ಹೋದಳು! ಮಿಲರೇಪನೂ ಅತಿ ವ್ಯಸನದಿಂದ ಮುಂದೆ ಸಾಗಿದ. ಊರಿನಲ್ಲೆಲ್ಲ ಸುದ್ದಿ ಹರಡಿತು—ಶ್ವೇತಮಾಲೆಯ ಮಗ ತಮಗಾದ ಅನ್ಯಾಯಕ್ಕೆ ಪ್ರತೀಕಾರವೆಸಗಲು ಇಂದ್ರ

ಜಾಲ ವಿದ್ಯೆಯ ನೆರವು ತರಲು ದೂರದೇಶಕ್ಕೆ ಹೋಗಿದ್ದಾನೆ—ಎಂದು.

ವಿದ್ಯಾರ್ಥಿಗಳು ಉಯ್-ತ್ಸಂಗ್ ದಾರಿ ಹಿಡಿದು ಯಕ್ಡೆ ನಗರಕ್ಕೆ ಬಂದರು; ಇಲ್ಲಿ ಮಿಲರೇಪ ತನ್ನ ಬಳಿಯಿದ್ದ ವಸ್ತುಗಳಲ್ಲಿ ಕೆಲವನ್ನು ಮಾರಿ ಚಿನ್ನ ಕೊಂಡು ತನ್ನ ಮೈಮೇಲೆ ಭದ್ರಪಡಿಸಿಕೊಂಡ. ನಂತರ ತ್ಸಂಗ್‌ಪೊ (ಪಾವನೀ) ನದಿಯನ್ನು ದಾಟಿ ಥೊಯ್ಸ್-ಲುಕ್-ರಖ ನಗರಕ್ಕೆ ಬಂದು ಅಲ್ಲಿ ವಿಚಾರ ಮಾಡಿ, ನೆರೆಯ ಗ್ರಾಮವಾದ ಯರ್ಲುಂಗ್-ಕ್ಯೋರ್ಪೊದಲ್ಲಿ ವಿಖ್ಯಾತ ಮಂತ್ರವಾದಿಯೊಬ್ಬನಿರುವನೆಂದು ತಿಳಿದುಕೊಂಡರು. ಯುಂಗ್‌ಟನ್ ಟ್ರೊಗ್ಯಲ್ (ರುದ್ರ-ದಮನ) ಎಂದು ಅವನ ಹೆಸರು; ಶಾಕಿನೀ ಡಾಕಿನೀ ಮುಂತಾದ ಕ್ರೂರ ದೇವತೆಗಳನ್ನು ವಶಪಡಿಸಿಕೊಂಡು ಮಂತ್ರ ಶಕ್ತಿಯಿಂದ ಮರಣ-ವಿನಾಶಗಳನ್ನು ತಂದೊಡ್ಡುವವರಲ್ಲಿ ಇವನು ಅಗ್ರಗಣ್ಯ.

ಮಿಲರೇಪ ಮತ್ತಿತರರು ಈ ರುದ್ರ-ದಮನನ ಬಳಿ ಬಂದರು. ಮಿಲರೇಪನನ್ನುಳಿದು ಇತರರು ತಮ್ಮಲ್ಲಿದ್ದ ಧನದಲ್ಲಿ ಒಂದು ಪಾಲನ್ನು ಗುರುದಕ್ಷಿಣೆಯಾಗಿ ರುದ್ರ-ದಮನನಿಗೆ ಸಮರ್ಪಿಸಿದರು. ಮಿಲರೇಪನಾದರೋ ತನ್ನ ಬಳಿಯಲ್ಲಿದ್ದುದನ್ನೆಲ್ಲ ಸಮರ್ಪಿಸಿದ್ದಲ್ಲದೆ ತನ್ನ ದೇಹ-ಆತ್ಮಗಳನ್ನೂ ಗುರುಗಳಿಗೆ ಸಮರ್ಪಿತ ಎಂದ; ತನ್ನ ಕಥೆಯನ್ನೆಲ್ಲ ವಿಶದವಾಗಿ ವರದಿಮಾಡಿ ತನಗೆ ಮಾರಣ ವಿದ್ಯೆ ಕಲಿಸಿಕೊಡುವಂತೆ ಕೋರಿಕೊಂಡ. ಗುರು ನಸುನಕ್ಕು "ನೋಡುವ" ಎಂದ. ಗುರುವಿನ ಬಳಿ ವ್ಯಾಸಂಗ ಆರಂಭವಾಗಿ ಕುಂಟುತ್ತ ಕುರುಡುತ್ತ ಒಂದು ವರ್ಷ ಕಳೆಯಿತು. ಮಿಲರೇಪನ ವಿನಾ ಉಳಿದ ವಿದ್ಯಾರ್ಥಿಗಳು "ಇನ್ನು ಕಲಿತುದು ಸಾಕು, ಇಷ್ಟನ್ನು ಶ್ರದ್ಧೆಯಿಂದ ಕೈಗೂಡಿಸಿಕೊಂಡರೆ ಎಷ್ಟೋ ಆಯಿತು," ಎಂದುಕೊಂಡು ಗುರುಗಳ ಸಮ್ಮತಿಯನ್ನು ಪಡೆದು

ಕೊಂಡು ತಂತಮ್ಮ ಮನೆಗಳಿಗೆ ಹೊರಟರು. ಆದರೆ ಮಿಲರೇಪ ನಿಗೆ ತನ್ನ ವಿದ್ಯಾರ್ಜನೆ ಸಾಕೆನಿಸಲಿಲ್ಲ; ಇಷ್ಟರಿಂದ ಸೂತ್ರಸಿಂಹ ನನ್ನು ಕೊಲ್ಲಲು ಸಾಧ್ಯವೆ? ಕೊಲ್ಲದಿದ್ದರೆ ತನ್ನ ತಾಯಿ ಆತ್ಮ ಹತ್ಯೆ ಮಾಡಿಕೊಳ್ಳುವೆನೆಂದು ಪಣ ತೊಟ್ಟಿಲ್ಲವೆ? ಸಂಗಾತಿಗಳೆಲ್ಲ ಮರಳಿದರೂ ಮಿಲರೇಪ ಗುರುಸನ್ನಿಧಿ ಬಿಡಲಿಲ್ಲ. ಗುರುಗಳಿಗೆ ವಾತ್ಸಲ್ಯದಲ್ಲಿ ಇವನ ಮೇಲೆ ಅನುರಾಗ ಹುಟ್ಟಿತ್ತು; ಇಷ್ಟು ತದೇಕ ಧ್ಯಾನದಿಂದ ಸಾಧನೆಮಾಡುವ ಶಿಷ್ಯ ಅವರಿಗೆ ದೊರೆತಿರ ಲಿಲ್ಲ. ಉಳಿದ ಶಿಷ್ಯರಿಗೆ ಅವರು ಮನಸಾ ಪಾಠ ಹೇಳಲೂ ಇಲ್ಲ, ಅವರಿಗೆ ಅದರಿಂದ ಸಿದ್ಧಿಯೂ ಸಿಗಲಿಲ್ಲ. ಆದರೆ ಮಿಲರೇಪನ ಧೃತಿಗೆ ಮೆಚ್ಚಿ ರುದ್ರ-ದಮನ ಗುರುಗಳು ತಮ್ಮ ನಚ್ಚಿನ ಶಿಷ್ಯ ನೊಬ್ಬನನ್ನು ಮಿಲರೇಪನ ಊರಿಗೆ ಮಿಲರೇಪನ ಕಥೆಯಲ್ಲಿ ಸತ್ಯಾಂಶ ಇದೆಯೇ ಎಂದು ತಿಳಿಯಲು ಕಳುಹಿಸಿದರು. ಆ ಶಿಷ್ಯ ಬಂದು ಕಥೆ ನಿಜವೆಂದು ಹೇಳಿದಮೇಲೆ ಗುರುಗಳು ಮಿಲರೇಪ ನನ್ನು ಕರೆದು ಆಶೀರ್ವದಿಸಿ ತಮ್ಮ ಶಿಷ್ಯನೇ ಆದ ಖುಲುಂಗ್ ನಗರದ ಶೀಲಸಮುದ್ರನೆಂಬುವನ ಬಳಿಗೆ ತಮ್ಮ ಶ್ರೀಮುಖ ದೊಂದಿಗೆ ಮಾರಕ ವಿದ್ಯಾರ್ಜನೆಗೆ ಕಳುಹಿಸಿಕೊಟ್ಟರು.

ತನ್ನ ಗುರುಗಳ ಶ್ರೀಮುಖ ತಂದ ಮಿಲರೇಪನನ್ನು ಶೀಲ ಸಮುದ್ರ ಆದರದಿಂದ ಬರಮಾಡಿಕೊಂಡು, "ಗುರುಗಳ ಆದೇಶ ದಂತೆ ಮಾರಕ ವಿದ್ಯೆಯನ್ನು ನಿನಗೆ ಕಲಿಸುತ್ತೇನೆ. ಇದಕ್ಕಾಗಿ ಒಂದು ಕೃತಕ ಗುಹೆಯನ್ನು ನಿರ್ಮಿಸಿಕೊ. ಅದರ ಬಹುಭಾಗ ಭೂಗರ್ಭದಲ್ಲಿರಲಿ. ಅದರ ಬಾಗಿಲು ಭದ್ರವಾಗಿ ಮುಚ್ಚಿರಲಿ," ಎಂದು ಹೇಳಿ ಸಾಧನೆಯ ವಿಧಾನವನ್ನು ವಿವರಿಸಿದ. ಅದ ರಂತೆಯೇ ಮಿಲರೇಪ ಒಂದು ಗುಹೆಯನ್ನು ಕಟ್ಟಿಕೊಂಡು ಒಳಗೆ ಏಳು ದಿನ ಪರ್ಯಂತ ಕೂತು ಏಕಾಗ್ರತೆಯಿಂದ ಸಾಧನೆ ಮಾಡಿದ. ಏಳು ದಿನಗಳು ಕಳೆದಂದು ಗುಹೆಯ ಬಾಗಿಲ ಬಳಿ

ಶೀಲಸಮುದ್ರ ಬಂದು ನಿಂತು "ಏಳು ದಿನ ಸಾಧನೆಗೆ ಸಾಕು ; ನಿನಗೆ ಸಿದ್ಧಿ ದೊರೆತಿದೆ, ಹೊರಗೆ ಬಾ" ಎಂದು ಕೂಗಿ ಹೇಳಿದ. ಆದರೆ ತನ್ನ ಪ್ರತಿಕ್ರಿಯೆಯ ಸ್ಥಳ ಅತಿ ದೂರ ದೇಶವಾದ್ದರಿಂದ ಮಿಲರೇಪನಿಗೆ ಈ ಸಿದ್ಧಿಯ ವಿಚಾರದಲ್ಲಿ ಅಷ್ಟು ವಿಶ್ವಾಸ ಇರಲಿಲ್ಲ! ಸಿದ್ಧಿಯನ್ನು ಬೇರೂರಿಸಿ ಖಚಿತಮಾಡಿಕೊಳ್ಳಲು ಮತ್ತೆ ಏಳು ದಿನಗಳ ಸಾಧನೆ ಆವಶ್ಯಕವೆಂದು ಅವನಿಗೆ ತೋರಿತು. ಶೀಲಸಮುದ್ರನೂ ಇದಕ್ಕೆ ತನ್ನ ಅನುಜ್ಞೆ ಕೊಟ್ಟು ಹೋದ. ಕೂತಲ್ಲಿಂದ ಏಳದೆ ಮಿಲರೇಪ ಮತ್ತೆ ಏಳು ದಿನ ಸಾಧಿಸಿದ. ಹದಿನಾಲ್ಕನೆಯ ದಿನ ರಾತ್ರಿ ಶೀಲಸಮುದ್ರ ಬಂದು, "ಈ ರಾತ್ರಿ ನಿನ್ನ ಬಲಿವೇದಿಯ ಮೇಲೆ ನಿನ್ನ ಸಿದ್ಧಿಗೆ ನಿದರ್ಶನವನ್ನು ನೋಡುವೆ. ನಿನ್ನ ಮನೋರಥವೂ ಪೂರ್ಣವಾಗುವುದು," ಎಂದು ಹೇಳಿ ಹೋದ. ಅಂತೆಯೇ ಅಂದೇ ರಾತ್ರಿ ಬಲಿ ವೇದಿಯ ಮೇಲೆ ಕುಲದೇವತೆಗಳು ಕಾಣಿಸಿಕೊಂಡವು ; ಅವು ಮೂವತ್ತೈದು ಮಂದಿಯ ತಲೆಗಳನ್ನು ತಂದು ಆ ರಕ್ತ ಮಾಂಸಗಳ ಮುದ್ದೆಯನ್ನು ಮಿಲರೇಪನ ಮುಂದೆ ಹಾಕಿ "ನಮ್ಮನ್ನು ನೀನು ಆಹ್ವಾನಿಸಿದುದು ಇದಕ್ಕೇ ಅಲ್ಲವೆ ?" ಎಂದು ಕೇಳಿದವು. ಮರುದಿನ ಬೆಳಗ್ಗೆ ಶೀಲಸಮುದ್ರ ಮತ್ತೆ ಬಂದು "ನಿನ್ನ ಶತ್ರುಗಳ ಪೈಕಿ ಇಬ್ಬರು ಮಾತ್ರ ಉಳಿದಿದ್ದಾರೆ; ಅವರೂ ಬಲಿಯಾಗಲೇ ಅಥವಾ ಉಳಿಯಲೆ ?" ಎಂದು ಪ್ರಶ್ನಿಸಿದ. ಮಿಲರೇಪ "ಉಳಿಯಲಿ, ನನ್ನ ಶಕ್ತಿಯ ಸ್ಮಾರಕವಾಗಿ ಈ ಎರಡು ಪ್ರಾಣಿಗಳು ಉಳಿದಿರಲಿ" ಎಂದ. ಈ ಇಬ್ಬರು ವಜ್ರಸಿಂಹ ಮತ್ತು ಅವನ ಹೆಂಡತಿ. ಇದಾದಮೇಲೆ ಮಿಲರೇಪ ಕುಲದೇವತೆಗಳಿಗೆ ಶಾಂತಿ ಮಾಡಿ ಅವರನ್ನು ಅಭಿನಂದಿಸಿ ತನ್ನ ಗುಹಾವಾಸದಿಂದ ಹೊರಬಂದ.

ಇತ್ತ ಅವನ ಮಾರಕ ಮಂತ್ರದ ಮಹಿಮೆ ಹೇಗಿತ್ತೆಂದರೆ—

ಅವನ ಗ್ರಾಮದಲ್ಲಿ ವಜ್ರಸಿಂಹನ ಜ್ಯೇಷ್ಠ ಪುತ್ರ ಅಂದು ಮದುವಣಿಗ; ಮನೆಯಲ್ಲಿ ಮಹೋತ್ಸಾಹ; ಔತಣ ಸಮಾರಂಭ ಸಾಗುತ್ತಿದೆ. ಅಲ್ಲಿ ನೆರೆದಿದ್ದವರಲ್ಲಿ ಮೂವತ್ತೈದು ಮಂದಿ ಮಿಲರೇಪನ ಮನೆಯುವರನ್ನು ಅತಿ ಬವಣೆಗೀಡುಮಾಡಿದ್ದವರು. ಅವರೆಲ್ಲ ಸಂತೋಷ ಸಂಭ್ರಮದಲ್ಲಿದ್ದಾಗ ಮನೆಯ ಊಳಿಗ ದವಳು ಒಂದು ಅಚ್ಚರಿ ಕಂಡಳು—ಎಮ್ಮೆಯಷ್ಟು ದೊಡ್ಡ ದೊಂದು ಚೇಳು ಮನೆಯ ಆಧಾರ ಸ್ತಂಭವನ್ನು ತನ್ನ ಮುಂಗಾಲುಗಳಿಂದ ಅಪ್ಪಿಕೊಂಡು ಎಳೆದಾಡುತ್ತಿದೆ. ಊಳಿಗ ದವಳು ಬೆದರಿ ಕಿಟ್ಟೆಂದು ಕಿರಿಚಿಕೊಂಡಳು; ಆಗ ಲಾಯದಲ್ಲಿದ್ದ ಕುದುರೆಗಳೆಲ್ಲ ಮನೆಯೊಳಗೆ ನುಗ್ಗಿ ದಾಂಧಲೆ ಮಾಡಹತ್ತಿದವು; ಕುದುರೆಗಳ ಒದೆದಾಟದಲ್ಲಿ ಚೇಳು ಹಿಡಿದಿದ್ದ ಕಂಭ ಕಳಚಿ ಕೊಂಡು ಬಿದ್ದು ಇಡೀ ಮನೆ ದಢಾರೆಂದು ನೆಲಸಮ ಆಯಿತು. ಒಳಗಿದ್ದವರೆಲ್ಲ ಅಳಿದರು; ವಜ್ರಸಿಂಹನ ಶೃಂಗಾರಸದನ ಮಣ್ಣು ಗೂಡಿ ಬೆಂಕಿಯೂಡಿತು. ಹೊರಗಿದ್ದವರ ಆರ್ತನಾದದ ಅಪಸ್ವರ ಮುಗಿಲು ಮುಟ್ಟಿತು. ಈ ಸುದ್ದಿ ಮಿಲರೇಪನ ತಾಯಿ ಶ್ವೇತಮಾಲೆಯ ಕಿವಿ ಮುಟ್ಟಿತು; ಒಡನೆ ಆಕೆ ಓಡಿಬಂದು ತುಸು ಹೊತ್ತು ದಿಗ್ಭ್ರಮೆಯಿಂದ ನೋಡುತ್ತಿದ್ದು ಸಂದರ್ಭದ ಅರಿವಾದೊಡನೆ ವಿಕಟವಾಗಿ ನಗುತ್ತ ಚಪ್ಪಾಳೆ ತಟ್ಟಿ ಇದ್ದವ ರನ್ನೆಲ್ಲ ಕರೆದು "ನೋಡಿ, ನನ್ನ ಮಗ ಮಿಲರೇಪನ ಸಾಹಸ ನೋಡಿ! ನನ್ನ ಭಾವ ನಮ್ಮನ್ನು ಹಂಗಿಸಿ 'ಶಕ್ತಿಯಿದ್ದರೆ ಹಗರಣಮಾಡಿ, ಇಲ್ಲದಿದ್ದರೆ ಶಾಪವಿಡಿ' ಎಂದದ್ದು ನಿಮಗೆ ನೆನಪಿದೆಯೇ? ನಮ್ಮ ಶಾಪದ ಫಲ ಇದು! ಅವನ ಮನೆ ಸಂಪೂರ್ಣವಾಗಿ ನಾಶವಾಯಿತು. ನನ್ನ ಹೃದಯದ ಬೇಗೆ ಇಂದು ಶಾಂತವಾಯಿತು. ಭಲಾ, ಮಿಲರೇಪ! ಸಂತೋಷದ ಸುದ್ದಿ ಇದು! ಇವತ್ತೇ ಸುದಿನ!" ಎಂದಳು. ಅವಳ ಈ

ಸಂತೋಷವನ್ನು ಕಂಡು ಊರಿನವರು ಅಸಹ್ಯಪಟ್ಟರು: ವಜ್ರ ಸಿಂಹ ಅನ್ಯಾಯವನ್ನೇ ಮಾಡಿದ, ಆದರೆ ಹೀಗೆ ಊರಮಂದಿ ಯನ್ನೇ ನಾಶಮಾಡಲು ಮಗನನ್ನು ಎತ್ತಿಕಟ್ಟಿದುದು ಸಾಲದೆ ಅವನ ಈ ಭೀಕರ ಉದ್ಯಮ ಯಶಸ್ವಿಯಾದುದಕ್ಕೆ ಸೂರ್ಯ ನನ್ನೇ ನಾಚಿಸುವಂತೆ ಕುಣಿದಾಡುತ್ತಿದ್ದಾಳೆ ಈ ಭೈರವಿ!

ಅವಳ ಕ್ರೂರ ವರ್ತನೆಗೆ ಪ್ರತೀಕಾರ ಮಾಡುವ ಸಂಕಲ್ಪ ಊರಮಂದಿಯ ಮನಸ್ಸಿಗೆ ಬಂದಿತು. ವಜ್ರಸಿಂಹನಂತೂ ಕೆಂಡಕೆಂಡವಾಗಿ ಅನಿಷ್ಟನಾಗಿ ಶ್ವೇತಮಾಲೆಯನ್ನು ಕೊಲ್ಲಲು ಕತ್ತಿ ಎತ್ತಿಕೊಂಡು ಓಡಿಬಂದ. ಊರ ಜನ ಅವನನ್ನು ತಡೆದು "ಎಲೆ ಮಡ್ಡಿ, ಈ ಅನರ್ಥ ಪರಂಪರೆಗೆ ನೀನೇ ಮೂಲಹೇತು. ಈಗ ಇವಳನ್ನು ಕೊಂದರೆ ಇಂದ್ರಜಾಲದಲ್ಲಿ ಪ್ರಬಲನಾದ ಮಿಲರೇಪ ಊರನ್ನು ಸುಮ್ಮನೆ ಬಿಡುವನೊ? ಮೊದಲು ಆ ಮರಿಯನ್ನು ಹಿಡಿದು ಕೊಂದು ನಂತರ ಈ ಸಿಂಹಿಣಿಯನ್ನು ಕೊಲ್ಲುವಾ" ಎಂದು ಸಲಹೆ ಮಾಡಿದರು.

ನಂತರ ಅವರೆಲ್ಲ ಗುಪ್ತವಾಗಿ ಸೇರಿ ಮಿಲರೇಪನನ್ನು ಹಿಡಿದು, ಬಂಧಿಸಿ, ಕೊಲೆಮಾಡಲು ಕಟುಕರನ್ನು ಕಳುಹಿಸಿದರು. ಈ ಸುದ್ದಿ ಶ್ವೇತಮಾಲೆಯ ಅಣ್ಣನ ಕಿವಿಗೆ ಬಿತ್ತು. ಅವನು ಶ್ವೇತಮಾಲೆ ಯನ್ನು ಅವಳ ಅಸಹಜ ಕ್ರೂರ ವರ್ತನೆಗೆ ಕಟುವಾಗಿ ನಿಂದಿಸಿ ಮಿಲರೇಪನ ಜೀವಕ್ಕೆ ಸಂಚಕಾರ ಮಾಡುವ ಸನ್ನಾಹವನ್ನು ಹೇಳಿ ಮುಂದೆ ಜಾಗ್ರತೆಯಿಂದಿರಬೇಕೆಂದು ಎಚ್ಚರಿಕೆ ಕೊಟ್ಟ. ಸುದ್ದಿ ಬೇರೊಂದೆಡೆಯಿಂದ ಶ್ವೇತಮಾಲೆಯ ಕಿವಿಗೆ ಬಿದ್ದು ಮಗ ನಿಗೆ ಈ ವಿಚಾರದಲ್ಲಿ ಎಚ್ಚರಿಕೆ ಕೊಡುವ ಏರ್ಪಾಡು ಮಾಡಿದಳು. ತನ್ನ ಭೂಮಿಯಲ್ಲಿ ಉಳಿದ ಒಂದು ತುಂಡನ್ನು ಮಾರಿ ಬಂದ ಹಣವನ್ನು ಮಿಲರೇಪನಿಗೆ ಕಳುಹಿಸಲು ಕೊಡಿಟ್ಟಳು. ಮಿಲರೇಪ ಇದ್ದ ಊರಿಗೆ ಹೊರಟ ಉಯ್ ಪ್ರಾಂತ್ಯದ ಬಡ ಪ್ರಯಾಣಿಕ

ನೊಬ್ಬನನ್ನು ಹಿಡಿದು ಅವನಿಗೆ ತನ್ನ ಮನೆಯಲ್ಲಿ ಉಪಚಾರ ಮಾಡಿ ಊಟಹಾಕಿ, ಅವನು ಹೊದ್ದಿದ್ದ ಹಳೆಯ ಹಚ್ಚಡವನ್ನು ಹೊಲಿದು ಕೊಡುವ ನೆಪದಿಂದ ಅದರೊಳಗೆ ಏಳು ಚಿನ್ನದ ತುಂಡುಗಳನ್ನು ನಕ್ಷತ್ರಾಕಾರದಲ್ಲಿ ಸೇರಿಸಿ ಕಾಣದಂತೆ ಹೊಲಿದುಕೊಟ್ಟಳು; ಹೊರಡುವಾಗ ಅವನನ್ನು ವಿಶೇಷವಾಗಿ ಸತ್ಕರಿಸಿ ಅವನ ಬಳಿ ಪತ್ರವೊಂದನ್ನು ಕೊಟ್ಟು ಮಿಲರೇಪನಿಗೆ ಮುಟ್ಟಿಸುವಂತೆ ಹೇಳಿದಳು. ತನ್ನ ನೆಮ್ಮದಿಗೆ ಬೇರೊಂದು ಉಪಾಯಮಾಡಿದಳು. ತನ್ನ ಮಗನಿಂದ ತನಗೆ ಕಾಗದ ಬಂದಿದೆ ಯೆಂದು ಸುಳ್ಳೇ ಸುದ್ದಿ ಹುಟ್ಟಿಸಿದಳು; ಒಂದು ಕೃತಕ ಕಾಗದ ವನ್ನು ಮಿಲರೇಪನ ಮುದ್ರೆಯಲ್ಲಿ ನಿರ್ಮಿಸಿ ಊರ ಮುಖಂಡರ ಕೈ ಸೇರುವಂತೆ ಮಾಡಿದಳು. ಅದರಲ್ಲಿದ್ದ ಒಕ್ಕಣೆ—"ಅಮ್ಮಾ, ನನ್ನ ಮಂತ್ರಸಿದ್ಧಿಯ ಯಶಸ್ಸನ್ನು ಕಂಡೆಯಾ? ಶತ್ರುಗಳೆಲ್ಲ ನಿರ್ಮೂಲವಾದರಲ್ಲ? ಈಗ ನೀನೂ ನನ್ನ ತಂಗಿಯೂ ಸುಖ ವಾಗಿರುವಿರಷ್ಟೆ. ಅಥವ ನಿಮ್ಮ ಮೇಲೆ ಖಂಗನ್ನಿಟ್ಟು ನಿಮ್ಮನ್ನು ಹಿಂಸಿಸುವ ಪ್ರಯತ್ನ ಯಾರಾದರೂ ಮಾಡುತ್ತಿದ್ದಾರೆಯೆ? ಹಾಗಿದ್ದರೆ ಅವರು ಯಾರೆಂದು ನನಗೆ ತಿಳಿಸು, ಅವರ ಒಂಬತ್ತನೆಯ ತಲಾಂತರದವರೆಗೆ ಅವರ ವಂಶವನ್ನು ಧ್ವಂಸ ಮಾಡುವ ಪರಾಕ್ರಮ ನನಗುಂಟು. ಊರೇ ನಿನ್ನಲ್ಲಿ ಕೋಪ ಗೊಂಡಿದ್ದರೆ, ಹೇಳು, ಒಂದು ತೃಣದ ಅವಶೇಷ ಇಲ್ಲದಂತೆ ಇಡೀ ಊರನ್ನೇ ನಾಶಮಾಡುವೆ." ಎಂದೆಲ್ಲ ಇತ್ತು. ಇದರಿಂದ ಬೆದರಿ ಊರಿನವರು ತಮ್ಮ ಸನ್ನಾಹವನ್ನು ನಿಲ್ಲಿಸಿಬಿಟ್ಟರು.

---

# ಮಿಲರೇಪನ ಸೇಡು

ಆ ಯಾತ್ರಿಕ ಮಿಲರೇಪನಿಗಾಗಿ ಅಲ್ಲಲ್ಲಿ ಹುಡುಕುತ್ತ ನುಬ್-ಖುಲುಂಗ್‌ನಲ್ಲಿರುವನೆಂದು ಕೇಳಿ ಅಲ್ಲಿಗೆ ಬಂದ. ಬಂದವನೇ ಮಿಲರೇಪನನ್ನು ಭೇಟಿಮಾಡಿ ಅವನಿಗೆ ತನ್ನೂರಿನ ಸುದ್ದಿಯನ್ನು ತಿಳಿಸಿ ಶ್ವೇತಮಾಲೆ ಕಳಿಸಿದ್ದ ಪತ್ರವನ್ನು ಕೊಟ್ಟ. ಪತ್ರದ ಅಭಿಪ್ರಾಯ ಹೀಗಿತ್ತು—"ನಿನ್ನ ಮಂತ್ರಶಕ್ತಿಯ ಪ್ರಾಬಲ್ಯಕ್ಕೆ ಮೆಚ್ಚಿಗೆ; ನಮ್ಮ ಶತ್ರುಗಳಲ್ಲಿ ಮೂವತ್ತೈದು ಮಂದಿ ಮಡಿದರು. ನನ್ನ ಹೃದಯಕ್ಕೆ ಬೇಕಾದಷ್ಟು ಸಾಂತ್ವನ ದೊರಕಿತು. ಆದರೆ ಇದರಿಂದಾಗಿ ಊರಜನರೆಲ್ಲ ನಮ್ಮ ಮೇಲೆ ಮುನಿದಿದ್ದಾರೆ; ನನ್ನ ಮತ್ತು ನಿನ್ನ ಜೀವಕ್ಕೆ ಧಕ್ಕೆತರುವ ಯೋಜನೆಗಳನ್ನು ಚಿಂತಿಸುತ್ತಿದ್ದಾರೆ. ಅದು ಕಾರಣ ಈಗ ನನ್ನ ಬಯಕೆಯೆಂದರೆ—ಈ ಊರಿಗೆ ತೀವ್ರವಾದ ಪ್ರಳಯಮಾರುತ ಬೀಸಿ ಊರನ್ನು ನಾಶಮಾಡುವಂತೆ ನಿನ್ನ ಮಂತ್ರಸಿದ್ಧಿಯನ್ನು ಪ್ರಯೋಗಿಸಬೇಕು. ಅಲ್ಲಿಗೆ ನನ್ನ ಮನೋರಥ ಪೂರ್ಣವಾದೀತು. ಏತನ್ಮಧ್ಯೆ ಜಾಗರೂಕನಾಗಿರು. ನಿನಗೆ ಹಣದ ಆವಶ್ಯಕತೆ ಇದ್ದೀತು. ಕಾರ್ಮೋಡ ಮುಸುಕಿ, ನಕ್ಷತ್ರಗಳು ಮಿನುಗುತ್ತಿರುವ ಉತ್ತರಾಭಿಮುಖವಾದ ಕಣಿವೆಯಲ್ಲಿ ಹುಡುಕು, ಅಲ್ಲಿ ನಮ್ಮ ಏಳುಮಂದಿ ನಂಟರು ಸಿಗುವರು. ಅವರನ್ನು ಕೇಳು, ನಿನಗೆ ಬೇಕಾದ ಪದಾರ್ಥಗಳನ್ನೆಲ್ಲ ಕೊಡುವರು. ಕಣಿವೆ ಕಾಣದಿದ್ದರೆ ಈ ಯಾತ್ರಿಕ ಆ ಕಣಿವೆಯ ನಿವಾಸಿಯೆಂಬುದನ್ನು ಮರೆಯದಿರು." ಮಿಲರೇಪನಿಗೆ ಸ್ವಗ್ರಾಮಕ್ಕೆ ಹಿಂದಿರುಗಿ ತನ್ನ ತಾಯಿ ತಂಗಿಯರನ್ನು ನೋಡುವ ಹಂಬಲ ಉತ್ಕಟವಾಗಿತ್ತು, ಆದರೆ ಪತ್ರದ ಸಂದಿ

ಗ್ಧತೆ ಅವನನ್ನು ಬೆಪ್ಪು ಹಿಡಿಸಿತು. ಅವನ ಗುರುಪತ್ನಿ ತುಂಬ ಚತುರೆ, ಅವಳ ಬುದ್ಧಿ ತೀಕ್ಷ್ಣತೆ ಅಸಾಧಾರಣವಾದದ್ದು. ಅವಳು ಶ್ವೇತಮಾಲೆಯು ಪತ್ರವನ್ನು ಓದಿ ಆ ಯಾತ್ರಿಕನನ್ನು ಇರ ಹೇಳಿ, ಅವನಿಗೆ ಒಂದು ಲಘು ಉಪಾಹಾರ ಸಮಾರಂಭ ಏರ್ಪಡಿಸಿ ಪ್ರಾಸಂಗಿಕವಾಗಿ ಅವನು ಹೊದ್ದಿದ್ದ ಹಚ್ಚಡ ಹರಿದಿದೆಯೆಂದು ತೋರಿಸಿ ಹೊಲಿಯಲು ಕೊಂಡಳು. ಸೂಜಿ ಯನ್ನು ಹುಡುಕುವ ನೆವದಿಂದ ಆ ಬಟ್ಟೆಯನ್ನು ಒಳಗೊಯ್ದಳು. ಶ್ವೇತಮಾಲೆ ಹೊಲಿದಿದ್ದ ನಕ್ಷತ್ರಾಕಾರದ ಬಟ್ಟೆಗಳನ್ನು ಕತ್ತರಿಸಿ ಒಳಗಿದ್ದ ಚಿನ್ನದ ಗುಂಡುಗಳನ್ನು ತೆಗೆದಿಟ್ಟುಕೊಂಡಳು. ನಂತರ ಮೊದಲಿದ್ದಂತೆಯೇ ಹೊಲಿದು ಹೊರಗೆ ಬಂದು ಯಾತ್ರಿಕನಿಗೆ ಬಟ್ಟೆಯನ್ನು ಹಿಂದಕ್ಕೆ ಕೊಟ್ಟಳು. ಯಾತ್ರಿಕ ಹೋದಮೇಲೆ ಮಿಲರೇಪನನ್ನು ಕರೆದು—" ನಿನ್ನ ತಾಯಿ ಬಲು ಚತುರೆ; ಯಾತ್ರಿಕನ ಬಟ್ಟೆಯಲ್ಲಿ ಇಗೋ ಈ ಧನ ಇತ್ತು. ಉತ್ತರಾಭಿಮುಖವಾದ ಕಣಿವೆಯೆಂದರೆ ಯಾತ್ರಿಕನ ಹಚ್ಚಡ; ಉತ್ತರಾಭಿಮುಖವಾದ ಕಣಿವೆಯೊಳಗೆ ಸೂರ್ಯರಶ್ಮಿಗಳು ಹೇಗೆ ಪ್ರವೇಶಿಸುವುದಿಲ್ಲವೋ ಹಾಗೆಯೇ ಈ ಹಚ್ಚಡದ ಒಳಗೆ ಸೂರ್ಯರಶ್ಮಿಗಳು ಹೋಗುವುದಿಲ್ಲ. ಕಾರ್ಮೋಡವೆಂದರೆ ಹಚ್ಚಡದಲ್ಲಿದ್ದ ಕಪ್ಪು ತೇಪೆ. ಮಿನುಗುವ ನಕ್ಷತ್ರಗಳು ನಕ್ಷತ್ರಾಕಾರದಲ್ಲಿ ಹಾಕಿದ್ದ ಹೊಲಿಗೆಗಳು. ಏಳು ಮಂದಿ ನಂಟರು ಏಳು ಚಿನ್ನದ ಗುಂಡುಗಳು" ಎಂದು ಹೇಳಿದಳು.

ಏಳು ಗುಂಡುಗಳಲ್ಲಿ ಮೂರನ್ನು ಮಿಲರೇಪ ತನ್ನ ಗುರುವಿಗೆ ದಕ್ಷಿಣೆಗಾಗಿ ಸಲ್ಲಿಸಿ ತನಗೆ ಚಂಡಮಾರುತ ಪ್ರವರ್ತನ ವಿದ್ಯೆ ಯನ್ನು ಕಲಿಸಿಕೊಡಿರೆಂದು ಪ್ರಾರ್ಥಿಸಿಕೊಂಡನು. ಗುರು ಪ್ರಸನ್ನನಾಗಿ ಈ ವಿದ್ಯೆಯಲ್ಲೂ ಕುಶಲನಾದ ತನ್ನ ಮಿತ್ರ ರುದ್ರ ದಮನನ ಬಳಿ ಅವನನ್ನು ಕಳುಹಿಸಿಕೊಟ್ಟನು. ಮಿಲರೇಪ

ಯರ್‌ಲೂಂಗ್ ಕ್ಯೊಪೊರ್ಗೆವಿಗೆ ಬಂದು ರುದ್ರ-ದಮನನನ್ನು ನೋಡಿ ನಮಸ್ಕರಿಸಿ ತನ್ನ ಗುರುವಿನಿಂದ ತಂದ ಶ್ರೀಮುಖ ವನ್ನು ನಿವೇದಿಸಿದನು. ರುದ್ರ-ದಮನ ತನ್ನ ಗುರ್ವಾಜ್ಞೆಯನ್ನು ಶಿರಸಾವಹಿಸಿ ಮಿಲರೇಪನಿಗೆ ಚಂಡಮಾರುತ ಪ್ರವರ್ತನ ವಿದ್ಯೆ ಯನ್ನು ಕಲಿಸಿದನು; ಪಾಠ ಪೂರೈಸಿದಂದು ಒಂದು ಯುಕ್ತ ಸಂದರ್ಭದಲ್ಲಿ ಅನುರೂಪವಾದ ಋತುವಿನಲ್ಲಿ ಅದನ್ನು ಪ್ರಯೋಗಿಸೆಂದು ಸಲಹೆಮಾಡಿದನು. ಮಿಲರೇಪ ವೇಷ ಮರೆಸಿ ರುದ್ರ-ದಮನನ ಶಿಷ್ಯನೊಬ್ಬನ ಜತೆಯಲ್ಲಿ ಪರಿಸ್ಥಿತಿ ಪರಿಶೀಲ ನೆಗೆ ತನ್ನ ಗ್ರಾಮಕ್ಕೆ ಬಂದನು. ಮಾಸಧರ್ಮದಿಂದ ಯಥೇಚ್ಛ ವಾಗಿ ಮಳೆಗರೆದಿದ್ದು ಬೆಳೆ ಎಲ್ಲೆಡೆಯೂ ಸಮೃದ್ಧವಾಗಿತ್ತು; ಊರ ಗಂಡಸರೆಲ್ಲ ತಮ್ಮ ತಮ್ಮ ಕ್ಷೇತ್ರಗಳ ಮೇಲೆಯೇ ದಿನ ವೆಲ್ಲ ಇದ್ದು ಬೆಳೆ ಆಯುತ್ತಿದ್ದರು. ಊರಲ್ಲೆಲ್ಲ ಸಂತೋಷ ಹರಡಿತ್ತು. ಕ್ರೂರಾಚರಣದಲ್ಲಿ ನಿವಿಷ್ಟಮಾನಸನಾದ ಮಿಲರೇಪ ನಿಗೆ ಇದೇ ಸುಸಂದರ್ಭವೆನಿಸಿತು. ಊರಾಚೆ ಗುಡ್ಡವೊಂದ ನ್ನೇರಿ ಅಲ್ಲಿ ಒಂದು ಗುಡಿಸಲನ್ನು ಕಟ್ಟಿ ಒಳಗೆ ಕುಳಿತು ಚಂಡ ಮಾರುತ ಪ್ರವರ್ತನ ವಿಧಿಗಳನ್ನು ಯಥಾವತ್ತಾಗಿ ಮಾಡಿದ. ಕೂಡಲೇ ಆಕಾಶದಲ್ಲಿ ದಟ್ಟವಾದ ಕಾರ್ಮೋಡ ಕವಿದು ಗುಡುಗು ಮಿಂಚುಗಳ ಆರ್ಭಟ ಶುರುವಾಯಿತು. ಮಿಲರೇಪ ತನ್ನ ಬೆರಳ ತುದಿಯನ್ನು ತನ್ನ ಗ್ರಾಮದೆಡೆ ತೋರಿದ. ಚಂಡಮಾರುತ ಅದನ್ನನುಸರಿಸಿ ಗ್ರಾಮದಮೇಲೆ ಝಾಡಿಸಿ ಬೀಸಿತು; ಕುಯಿ ಲಿಗೆ ಬಂದಿದ್ದ ಪುಷ್ಟವಾದ ಪೈರೆಲ್ಲ ಕಡಿದುಬಿದ್ದು ತೂರಿ ಹೋದುವು. ವರ್ಷದ ಸಸ್ಯಸಮೃದ್ಧಿಯಾದ ಅಶನ ನಿಶ್ಶೇಷವಾಗಿ ನಾಶವಾಯಿತು; ಇದನ್ನು ಕಂಡ ಊರ ಜನರ ಆರ್ತನಾದ ಮುಗಿಲು ಮುಟ್ಟಿತು.

ತುಸು ಹೊತ್ತಾದಮೇಲೆ ಮಿಲರೇಪ ಮತ್ತು ಅವನ ಸ್ನೇಹಿತ

(ರುದ್ರ-ದಮನನ ಶಿಷ್ಯ)ರಿದ್ದ ಗುಡಿಸಲ ಮುಂದೆ ಗ್ರಾಮಸ್ಥರು ಇಬ್ಬರು ಹೋಗುತ್ತಿದ್ದರು. ಅವರ ಸಂಭಾಷಣೆ ಹೀಗೆ ಸಾಗುತ್ತಿತ್ತು—"ಇವೆಲ್ಲ ಮಿಲರೇಪನ ಹಾವಳಿ; ನಮ್ಮ ಗ್ರಾಮವನ್ನು ಪೂರ್ತಿ ನೆಲಸಮ ಮಾಡುವವರೆಗೆ ಅವನ ಜೀವಕ್ಕೆ ನೆಮ್ಮದಿಯಿಲ್ಲವೇನೋ! ಇಷ್ಟು ಸಮೃದ್ಧವಾಗಿ ಬೆಳೆಬಂದು ಅರ್ಧ ಶತಮಾನ ಆಗಿತ್ತು; ಇವನ ವೈರಸಾಧನೆಗೆ ಇಂದು ಅದು ಬಲಿಯಾಯಿತು. ಈಗ ನಮಗೆ ಆ ಚಂಡಾಲ ಸಿಗಲಿ, ಅವನನ್ನು ಸೀಳಿ ಅವನ ರಕ್ತವನ್ನು ಬೊಗಸೆ ಕುಡಿದೇವು!" ಎಂದ ಒಬ್ಬ. ಅದಕ್ಕೆ ಇನ್ನೊಬ್ಬ, "ಶ್, ನೋಡಿ ಮಾತನಾಡು. ಆ ಗುಡಿಸಲಿನಿಂದ ಹೊಗೆ ಬರುತ್ತಿದೆ, ಯಾವ ಮಾಂತ್ರಿಕ ಇದ್ದಾನೋ!" "ಇನ್ನಾರು, ಮಿಲರೇಪನೇ ಇದ್ದೀತು. ಅವನು ನಮ್ಮನ್ನು ನೋಡಿರಲಿಕ್ಕಿಲ್ಲ. ಗ್ರಾಮಕ್ಕೆ ಹೋಗಿ ಜನರನ್ನು ಕರೆತಂದು ಅವನನ್ನು ಸುತ್ತುಗಟ್ಟಿ ಅವನ ಸಮಾಧಿ ಮಾಡೋಣ. ಇಲ್ಲವಾದರೆ ಅವನು ಇನ್ನೂ ಏನು ಅಪಕಾರ ಮಾಡುವನೋ."

ಈ ಸಂಭಾಷಣೆ ಮಿಲರೇಪ ಅವನ ಮಿತ್ರ ಇಬ್ಬರಿಗೂ ಕೇಳಿಸಿತು. ಒಡನೆಯೇ ಮಿತ್ರನು ಮಿಲರೇಪನಿಗೆ—"ನೀನು ಇಲ್ಲಿಂದ ಈಗಲೇ ಹೊರಡು. ನಾನಿಲ್ಲಿದ್ದು ನೀನೆಂದು ನಟನೆ ಮಾಡಿ ಅವರಿಂದ ತಪ್ಪಿಸಿಕೊಂಡು ಬರುತ್ತೇನೆ"—ಎಂದು ಮಿಲರೇಪನನ್ನು ಹೊರಡಿಸಿದ. ಅಲ್ಲಿಂದ ನಾಲ್ಕನೆಯ ರಾತ್ರಿ ಟಿಂಗ್ರಿ ಎಂಬೂರಿನ ಛತ್ರದಲ್ಲಿ ಭೇಟಿ ಮಾಡುವುದಾಗಿ ಗೊತ್ತು ಮಾಡಿಕೊಂಡರು. ತಮ್ಮ ತಾಯಿಯನ್ನು ಕಂಡು ಹೋಗಬೇಕೆಂಬ ಉತ್ಕಟೇಚ್ಛೆ ಮಿಲರೇಪನಿಗೆ ಇದ್ದಿತಾದರೂ ಇಂಥ ಸಂದರ್ಭ ಬಂದು ಇದ್ದಕ್ಕಿದ್ದಂತೆ ಹಿಂದಿರುಗಬೇಕಾಯಿತು. ಮಿಲರೇಪ ಹೊರಟುಹೋದಮೇಲೆ ಊರ ಜನ ಕೈಗಳಲ್ಲಿ

ಕೋಲು-ಕತ್ತಿಗಳನ್ನು ಹಿಡಿದು ಓಡಿಬಂದರು ; ರುದ್ರ-ದಮನನ ಶಿಷ್ಯ ತಾನೇ ಮಿಲರೇಪನೆಂದು ತೋರಿಸುತ್ತಾ ಅವರ ಹಿಡಿತ ದಿಂದ ತಪ್ಪಿಸಿಕೊಂಡು ಓಡುತ್ತ "ಅಯ್ಯಾ ಮಂಕರೇ, ನಿಮ ಗಿನ್ನೂ ಬುದ್ಧಿ ಬಂದಿಲ್ಲ. ನನ್ನ ಸಾಮರ್ಥ್ಯವನ್ನು ಎರಡು ಬಾರಿ ಅನುಭವಿಸಿದ್ದೀರಿ! ಅದರ ದುಃಖದ ಬೇಗೆ ಇನ್ನೂ ಇಂಗಿಲ್ಲ. ಈಗ ಮತ್ತೆ ನನ್ನನ್ನು ಸೆಣಸಲು ಬಂದಿದ್ದೀರಿ! ನಿಮ್ಮನ್ನೆಲ್ಲ ಬೂದಿ ಮಾಡಿ ನೀರಿನಲ್ಲಿ ಕದಡಿ ಕುಡಿಯುವ ಶಕ್ತಿ ನನ ಗುಂಟು!" ಎಂದು ಕೂಗಿ ಹೇಳಿದ. ಜನ ಸೋತು ಬೆದರಿ ಹಿಂದಿರುಗಿದರು. ಶಿಷ್ಯ ಮುಂದೆ ನಡೆದು ಟಿಂಗ್ರಿ ಮುಟ್ಟಿದ; ಅಲ್ಲಿನ ಛತ್ರದಲ್ಲಿ ಮಿಲರೇಪನನ್ನು ಸಂಧಿಸಿದ. ಇಬ್ಬರೂ ಒಟ್ಟಾಗಿ ಯಲ್ಗುಂಗ್-ಕ್ಯೋರ್‍ಪೋವಿಗೆ ಮರಳಿ ತಮ್ಮ ಗುರು ವನ್ನು ನೋಡಿ ಅಭಿವಂದಿಸಿ ನಡೆದ ಸಂಗತಿಯನ್ನು ವಿವರಿಸಿದರು.

ಒಂದು ದಿನ ಹೀಗೆಯೇ ಕುಳಿತು ಯೋಚಿಸುತ್ತಿದ್ದಾಗ ತಟ್ಟನೆ ಮಿಲರೇಪನ ಹೃದಯದಿಂದ ಉದ್ವೇಗದ ಅಗ್ನಿ ಹೊಗೆ ಯಾಡ ತೊಡಗಿತು. ತಾನು ನಡಸಿದ ಹತ್ಯಾಕಾಂಡದ ಚಿಂತನೆ ಮನಸ್ಸಿಗೆ ಬಂದು ಪರಿತಾಪದಿಂದ ಕುದಿದ. ಧರ್ಮ ಜೀವನ ನಡೆಸಲು ಸಂಕಲ್ಪವನ್ನೇನೋ ಮಾಡಿದ; ಆದರೆ ತನ್ನ ಗುರು ವಾಮಾಚಾರಿ, ಕ್ರೂರ ವಿದ್ಯೆಗಳಲ್ಲಿ ಪರಿಣತ, ಅವನಿಗೆ ಸಾಧು ಜೀವನದ ಅರಿವಿಲ್ಲ. ಅವನ ಬಳಿ ಧರ್ಮಾಭ್ಯಾಸ ಮಾಡುವುದು ಆಗದ ಮಾತು. ಆದ್ದರಿಂದ ಮಿಲರೇಪ ಮನಸ್ಸಿನಲ್ಲೇ ಕುರು ಕ್ಷೇತ್ರ ಕಾಣುತ್ತ ಕಂಗಾಲಾದ. ಹಗಲಲ್ಲಿ ಕುಳಿತಿದ್ದರೆ ನಡೆ ಯುವ ಚಪಲ, ನಡೆಯುತ್ತಿದ್ದರೆ ಕೂಡುವ ಚಪಲ; ರಾತ್ರಿ ನಿದ್ರೆಬಾರದು. ಮನಸ್ಸಿಗೆ ನೆಮ್ಮದಿಯಿಲ್ಲ, ಹೃದಯದಿಂದ ಪಶ್ಚಾತ್ತಾಪದ ಮಹಾನದಿ ದಂಡೆಯೊಡೆದು ಹರಿಯುತ್ತಿದೆ. ಹೀಗೆಯೇ ದಿನ ಕಳೆದುವು.

ಆದರೆ ಒಂದು ದಿನ ಈ ಗುರುವಿನ ಧನಿಕ ಶಿಷ್ಯನೊಬ್ಬ ರೋಗಕ್ಕೆ ತುತ್ತಾಗಿ ತೀರಿಕೊಂಡನು; ರುಗ್ಣಶಯ್ಯೆಯ ಬಳಿ ಗುರು ಇದ್ದನು. ಮರಣದ ಭೀಕರ ದೃಶ್ಯ ಗುರುವಿನ ಹೃದಯ ವನ್ನು ಹಿಡಿಯಿತು. ಸಂಸ್ಕಾರ ತೀರಿಸಿ ಮನೆಗೆ ಬಂದವನೇ ಗುರು ಮನದಲ್ಲಿ ಬೇಗುದಿಗೊಂಡು—"ಎಲ್ಲ ಅನಿತ್ಯ, ಜೀವ ಚಪಲ, ನಿಖಿಲವೂ ನಶ್ವರ. ನನ್ನ ಯುವಾವಸ್ಥೆಯಿಂದ ಇಲ್ಲಿಯವರೆಗೆ ಈ ಯಂತ್ರ-ಮಂತ್ರ, ಮಾಟ-ಮದ್ದು, ಇಂಥ ಕೃಷ್ಣ ಕರ್ಮಗಳ ಅಧ್ಯಯನ-ಅನುಸಂಧಾನಗಳಲ್ಲೇ ಕಾಲ ಕಳೆದಿದ್ದೇನೆ; ಎಂಥ ಅಗಾಧವಾದ ಪಾಪರಾಶಿ ನನ್ನ ಪಾಲಿಗೆ ಬೆಳೆದಿದೆಯೊ ? ಇನ್ನಾ ದರೂ ಧರ್ಮ ಜೀವನ ನಡೆಸಿ ನನ್ನ ಜೀವನ ಸಾರ್ಥಕಗೊಳಿಸಿ ಕೊಳ್ಳಲೆಳಸುತ್ತೇನೆ" ಎಂದು ಮುಂತಾಗಿ ಹಲುಬುತ್ತಿದ್ದ. ಇದೇ ಸಮಯ ಕಾಯುತ್ತಿದ್ದ ಮಿಲರೇಪ ತಟ್ಟನೆ ಬಂದು ಗುರುವಿನ ಪಾದ ಮುಟ್ಟಿ ಪ್ರಣಾಮ ಮಾಡಿ "ಗುರುಗಳೇ, ನಾನೂ ಈ ವಿನಾಶವಿದ್ಯೆಗಳಿಂದ ಬೇಸರಗೊಂಡಿದೇನೆ. ಇನ್ನು ಮಂಗಲವಾದ ಧರ್ಮವನ್ನು ಅಧ್ಯಯನ ಮಾಡುವ ಮನಸ್ಸಾಗಿದೆ. ದಯೆ ಮಾಡಿ ಯೋಗ್ಯನಾದ ಧರ್ಮಾಚಾರ್ಯನ ಬಳಿ ಕಳಿಸಿಕೊಡಲು ಅಪ್ಪಣೆಯಾಗಬೇಕು" ಎಂದು ಕೇಳಿಕೊಂಡ. ಮರುಮಾತಾ ಡದೆ ಗುರು ಅನುಮೋದಿಸಿ ಅವನನ್ನು ಸತ್ಕರಿಸಿ ಟ್ಯಾಂಗ್ ಕಣಿವೆಯಲ್ಲಿ ನರ್ ಎಂಬಲ್ಲಿದ್ದ ರೊಂಗ್‌ಟೊಯ್ಸ್ಲ್ಹಗ ಎಂಬ ಲಾಮ ಪಂಡಿತನ ಬಳಿಗೆ ಕಳುಹಿಸಿಕೊಟ್ಟನು; ಆ ಧರ್ಮಾ ಚಾರ್ಯನಿಗೆ ದಕ್ಷಿಣೆಯಾಗಿ ಸಲ್ಲಿಸುವ ಸಲುವಾಗಿ ಬೆಲೆಬಾಳುವ ಉಣ್ಣೆ ಬಟ್ಟೆಗಳನ್ನೂ ಮಿಲರೇಪನಿಗೆ ಕೊಟ್ಟನು.

---

# ಮಿಲರೇಪನ ಪಶ್ಚಾತ್ತಾಪ

ಮಿಲರೇಪ ನರ್ ಎಂಬ ಗ್ರಾಮಕ್ಕೆ ಬಂದು ತನ್ನ ಗುರು ಹೇಳಿದ ಲಾಮನನ್ನು ಹುಡುಕಿದ. ಆಗ ಲಾಮ ಮನೆಯಲ್ಲಿರಲಿಲ್ಲ, ನ್ಯಂಗ್ ಕಣಿವೆಯ ರಿನಂಗ್ ಎಂಬ ಗ್ರಾಮದಲ್ಲಿದ್ದ. ಮಿಲರೇಪ ರಿನಂಗ್ ಗ್ರಾಮಕ್ಕೆ ಹೋಗಿ ಅಲ್ಲಿ ಲಾಮನನ್ನು ಸಂಧಿಸಿ ತಾನು ತಂದ ಉಣ್ಣೆಬಟ್ಟೆಗಳನ್ನು ಕಾಣಿಕೆಯಾಗಿ ಸಮರ್ಪಿಸಿ "ಆಚಾರ್ಯಪಾದರೇ, ನಾನು ಪಶ್ಚಿಮ ಪ್ರಾಂತ್ಯದ ಒಬ್ಬ ದೊಡ್ಡ ಪಾಪಿ, ಅನೇಕಾನೇಕ ಕ್ರೂರಾಚರಣಗಳನ್ನು ಮಾಡಿದ್ದೇನೆ. ಆದರೀಗ ತಮ್ಮ ಪದತಲದಲ್ಲಿ ಕುಳಿತು ಸಂಸಾರ ಸಾಗರದಿಂದ ಪಾರುಮಾಡಿಸುವ ಧರ್ಮವನ್ನು ಅಭ್ಯಾಸ ಮಾಡಲು ಬಂದಿದ್ದೇನೆ. ದಯಮಾಡಿ ನನ್ನನ್ನು ಸ್ವೀಕರಿಸಿ" ಎಂದು ವಿನಯದಿಂದ ನಿವೇದಿಸಿಕೊಂಡ. ಲಾಮ ಆಗಲೆಂದು ಮಹಾ ಪಾರಮಿತಾಮಂತ್ರವನ್ನು ಅವನಿಗೆ ಉಪದೇಶಿಸಿ "ಶ್ರದ್ಧೆಯಿಂದ, ನಿಷ್ಠೆಯಿಂದ ಈ ಮಂತ್ರವನ್ನು ಒಂದೇ ಬಾರಿ ಮನನಮಾಡಿದರೂ ಅದರಿಂದ ಮಹತ್ಫಲವುಂಟು. ಕರ್ಮ ಪರಿಪಕ್ವವಾಗಿದ್ದರೆ ಅದರ ಶ್ರವಣಮಾತ್ರದಿಂದ ಮುಕ್ತಿ ಯಾದೀತು. ಆದರೆ ಅದಕ್ಕೆ ಯೋಗ್ಯತೆ ಬಹಳ ಬೇಕು" ಎಂದು ಹೇಳಿದ. ಮಾರಕವಿದ್ಯೆ, ಪ್ರಳಯಮಾರುತ ಪ್ರವರ್ತನ ವಿದ್ಯೆಗಳನ್ನೇ ವಶಮಾಡಿಕೊಂಡ ತನಗೆ ಇದು ಅತಿ ಸರಳವೆಂದು ಮಿಲರೇಪ ಅಹಂಕಾರದೂಷಿತವಾದ ಮನಸ್ಸಿನಿಂದ ಮಂತ್ರದ ಪುನಶ್ಚರಣಮಾಡಿದ. ದಿನಗಳು ಕಳೆದರೂ ಮಂತ್ರದ ಫಲ ಕಾಣಲಿಲ್ಲ.

ಹೀಗೆಯೇ ವ್ಯರ್ಥ ದಿನ ವ್ಯಯಮಾಡುತ್ತಿದ್ದ ಮಿಲರೇಪ

ನನ್ನು ನೋಡಿ ಲಾಮು, "ನೀನು ಪಾಪಿಯೆಂದು ಹೇಳಿಕೊಂಡುದು ಯಥಾರ್ಥ. ನಿನಗೆ ನನ್ನ ಸಿದ್ಧಾಂತದಿಂದ ಪ್ರಯೋಜನವಾಗದು; ನಿನ್ನನ್ನು ಪರಿವರ್ತಿಸುವಷ್ಟು ಶಕ್ತಿ ನನಗಿಲ್ಲ. ಆದರೆ ಲ್ಹೊಬ್ರಾಕ್ ದೇಶದಲ್ಲಿ ಡೋವ್ರೋ—ಲುಂಗ್ ಎಂಬ ಮಠದಲ್ಲಿ ಭಾರತ ದೇಶದ ಪ್ರಸಿದ್ಧ ಸಂತನಾದ ನರೋಪನ ಮೆಚ್ಚಿನ ಶಿಷ್ಯನಿದ್ದಾನೆ. ಅವನ ಹೆಸರು ಮಾರ್ಪ ಎಂದು. ನನ್ನ ಅನುಭವದಲ್ಲಿ ಬಂದ ಮಾನವರಲ್ಲೆಲ್ಲ ಅತಿ ಶ್ರೇಷ್ಠ ಅವನು. ಧರ್ಮಬೋಧೆಯಲ್ಲಿ ಅವನಿಗೆ ಸರಿ ಮತ್ತೊಬ್ಬ ಇಲ್ಲ. ನಿನಗೂ ಅವನಿಗೂ ಪ್ರಾಕ್ತನವಾದ ಕರ್ಮ ಸಂಬಂಧ ಇದೆಯೆಂದು ಕಂಡುಕೊಂಡಿದ್ದೇನೆ. ಅವನ ಬಳಿ ಹೋಗು, ನಿನಗೆ ಮಂಗಲವಾಗುವುದು" ಎಂದು ಹೇಳಿದನು. ಮಾರ್ಪನ ಹೆಸರು ಕೇಳಿದೊಡನೆಯೇ ಮಿಲರೇಪನ ಮೈ ಪುಲಕಿತವಾಯಿತು; ರೋಮ ಹರ್ಷಣವಾಯಿತು; ಹೃದಯದಲ್ಲಿ ಶ್ರದ್ಧೆ ಮೂಡಿತು. ಒಡನೆಯೇ ಸ್ಥಿರಬುದ್ಧಿಯಿಂದ ಅವನು ಅತ್ಯಲ್ಪ ಪಾಥೇಯದೊಂದಿಗೆ ಡೋವ್ರೋ-ಲುಂಗ್‌ನ ಕಡೆ ಹೊರಟನು.

ಇತ್ತ ಮಾರ್ಪಯೋಗಿಗೂ ಆ ರಾತ್ರಿ ಒಂದು ವಿಚಿತ್ರವಾದ ಕನಸು ಬಿದ್ದಿತು; ಅದರಲ್ಲಿ ತನ್ನ ಗುರು ನರೋಪ ತನಗೆ ದೀಕ್ಷಾಸಂಸ್ಕಾರಮಾಡಿ ಧ್ಯಾನ-ಉಪಾಸನೆಗೆಂದು ಮಲಿನವಾದ ಒಂದು ವಜ್ರಚಕ್ರವನ್ನು ಕೊಟ್ಟು ಅದನ್ನು ಶುದ್ಧಿಮಾಡುವಂತೆ ಹೇಳಿದ ಹಾಗಾಯಿತು, ತಾನು ಅದನ್ನು ಶುದ್ಧಿಮಾಡಿದಾಗ ಅದರ ಪ್ರಭೆ ಭೂಮ್ಯಂತರಾಳಗಳನ್ನು ಬೆಳಗಿ ಪ್ರಪಂಚದಲ್ಲಿ ದುಃಖದೌರ್ಮನಸ್ಯಗಳ ನಾಶಮಾಡಿದಂತಾಯಿತು. ಮಾರ್ಪನ ಪತ್ನಿಗೂ ಅದೇ ರಾತ್ರಿ ಅದೇ ತರಹದ ಸ್ವಪ್ನ ಆಯಿತು. ಪತಿಪತ್ನಿಯರಿಬ್ಬರೂ ಈ ಅಪೂರ್ವ ಸಂಘಟನೆಯನ್ನು ಕುರಿತು ಮಾತನಾಡಿಕೊಂಡರು. ಮಾರ್ಪನಿಗೆ ತನ್ನ

ಸ್ವಪ್ನದ ಆಶಯು ಅರ್ಥವಾಯಿತು. ಒಡನೆಯೇ ಎದ್ದು ಮಾರ್ಪ
ತನ್ನ ಹೆಂಡತಿಗೆ "ನಾನು ಹೊಲ ಉಳಲು ಹೋಗುತ್ತಿದ್ದೇನೆ,
ಆಹಾರದ ಬುತ್ತಿಕೊಡು. ಸ್ವಲ್ಪ 'ಛಾಂಗ್' (ಇದು ಟಿಬೆಟ್
ಜನರಲ್ಲಿ ವಾಡಿಕೆಯಾಗಿರುವ ಅಕ್ಕಿಯಿಂದ ತಯಾರಿಸಿದ
ಹೆಂಡ) ಕೊಡು" ಎಂದ. ಇದು ಕೇಳಿ ಅವಳಿಗೆ ಆಶ್ಚರ್ಯ
ವಾಯಿತು. "ನೀನು ಬಹಳವಾಗಿ ಹೊಲ ಉಳಲು ಹೋಗುವ
ವನಲ್ಲ. ಅಲ್ಲದೆ ನಮ್ಮ ಬಳಿ ಊಳಿಗದವರು ಅನೇಕ ಮಂದಿ
ಇದ್ದಾರೆ. ಶ್ರೀಮಂತ ಮಠಾಧಿಪತಿಯಾದ ನೀನು ಹೊಲ
ಉಳಲು ನಿಂತರೆ ಜನರೇನಂದಾರು?" ಎಂದು ಹೆಂಡತಿ
ಆಕ್ಷೇಪ ಎತ್ತಿದಳು. ಅವಳಿಗೆ ಮಣಿಯದೆ ಮಾರ್ಪ ಹೋಗುವೆ
ನೆಂದು ಹಠ ಹಿಡಿಯಲು ಆಕೆ ಅವನಿಗಾಗಿ ಸ್ವಲ್ಪ ಆಹಾರವನ್ನೂ,
ಕುಡಿಯಲು ಒಂದು ಪಾತ್ರೆ ಛಾಂಗ್‌ನ್ನೂ ತಂದುಕೊಟ್ಟಳು.
" ಇದು ಒಬ್ಬರಿಗಾದೀತು ಅಷ್ಟೆ, ಬೇರೆ ಯಾರಾದರೂ ಬಂದರೆ
ಅವರಿಗೆ ಬೇಡವೆ?" ಎಂದು ಮಾರ್ಪ ಎನ್ನಲು ಆಕೆ
ಮತ್ತೊಂದು ಪಾತ್ರೆಯಲ್ಲಿ ಛಾಂಗ್ ಕೊಟ್ಟಳು. ಮಾರ್ಪ
ಹೊಲದ ಕಡೆ ಹೊರಟ.

ಇತ್ತ ಮಿಲರೇಪ ಲ್ಹೊಬ್ರಾಕ್ ಪ್ರದೇಶದಲ್ಲಿ ಡೋವೋ
ಲುಂಗ್ ಮಠದ ಮಹಾಯೋಗಿ ಮಾರ್ಪನನ್ನು ಹುಡುಕಿ
ಕೊಂಡು ಹೊರಟ. ಅಲ್ಲಲ್ಲಿ ವಿಚಾರಮಾಡಿ ಮಾರ್ಪನ ಹೊಲದ
ಬಳಿ ಬಂದ. ಅಲ್ಲಿ ಉಳುತ್ತಿದ್ದ ಮಾರ್ಪನನ್ನೇ "ಸ್ವಾಮಿ,
ಇಲ್ಲಿ ಪ್ರಸಿದ್ಧ ಸಂತ ನರೋಪನ ಶಿಷ್ಯ ಮಾರ್ಪಯೋಗಿ
ಇರುವುದು ಎಲ್ಲಿ?" ಎಂದು ಕೇಳಿದ. ಸ್ಥೂಲಕಾಯನಾದ
ಮಾರ್ಪ, "ಏನು ವಿಚಾರ? ಮಾರ್ಪನ ಬಳಿ ಏನು ಕಾರ್ಯ?"
ಎಂದು ಪ್ರಶ್ನಿಸಿದ. ಮಿಲರೇಪ, "ನಾನು ಟ್ಸಾಂಗ್ ಪ್ರದೇಶದ
ಪಾಪಿ. ಮಾರ್ಪನ ಪಾದಸೇವೆಮಾಡಿ ತಾರಕವಾದ ಜ್ಞಾನ

ವನ್ನು ಪಡೆಯಲು ಬಂದಿದ್ದೇನೆ" ಎಂದುತ್ತರವಿತ್ತನು. ಮಾರ್ಪ, "ಒಳ್ಳೆಯದು, ಉಳಿದಿರುವ ಈ ಹೊಲದ ಭಾಗವನ್ನು ಉಳುವೆ ಯಾದರೆ ನಿನ್ನನ್ನು ಮಾರ್ಪನ ಬಳಿ ಕರೆದೊಯ್ಯುತ್ತೇನೆ" ಎಂದು ಹೇಳಿ ಒಂದು ಪಾತ್ರೆಯಲ್ಲಿ ಛಾಂಗ್ ಕುಡಿಯಲು ಕೊಟ್ಟು ಹೊರಟುಬಿಟ್ಟ. ಮಿಲರೇಪ ಶ್ರದ್ಧೆಯಿಂದ ಇಡೀ ಹೊಲವನ್ನು ಉತ್ತು ಅಲ್ಲಿದ್ದ ಒಬ್ಬ ಹುಡುಗನನ್ನು ಮಾರ್ಪನ ಮನೆಗೆ ತನ್ನನ್ನು ಕರೆದುಕೊಂಡು ಹೋಗಲು ಹೇಳಿದ. ಆ ಹುಡುಗನ ಜತೆ ಮಿಲರೇಪ ಹೊರಟು ತಾನು ಹೊಲದಲ್ಲಿ ಸಂಧಿಸಿದ ವ್ಯಕ್ತಿಯನ್ನೇ ಪುನಃ ಭೇಟಿಮಾಡಿದ. ಅವನೇ ಮಾರ್ಪನೆಂದು ಅರಿತು ತನ್ನ ವಿಚಾರವನ್ನೆಲ್ಲಾ ಅವನಲ್ಲಿ ನಿವೇದಿಸಿಕೊಂಡು ತನಗೆ ಅಧ್ಯಾಪನಮಾಡಲು ಪ್ರಾರ್ಥಿಸಿ ಕೊಂಡನು. "ನಾನು ಟ್ಸಾಂಗ್ ಪ್ರದೇಶಸ್ಥನಾದ ಮಹಾ ಪಾಪಿ. ಮೋಕ್ಷಗಾಮಿನಿಯಾದ ಜ್ಞಾನವನ್ನು ತಮ್ಮ ಬಳಿ ಅಭ್ಯಾಸ ಮಾಡಲು ಬಂದಿದ್ದೇನೆ. ನನ್ನ ಮನೋವಾಕ್ಕಾಯಗಳನ್ನು ಗುರುದಕ್ಷಿಣೆಯಾಗಿ ಸಲ್ಲಿಸುತ್ತೇನೆ. ಕರುಣೆಯಿಂದ ಅಂಗೀಕರಿಸ ಬೇಕು" ಎಂದು ದೈನ್ಯದಿಂದ ಬೇಡಿಕೊಂಡು ತನ್ನ ಪಾಪ ಕರ್ಮಗಳನ್ನು ವಿವರಿಸಿದ.

ಅದಕ್ಕೆ ಮಾರ್ಪ ಸಿಟ್ಟಿಗೆದ್ದು ಗಡುಸುದನಿಯಲ್ಲಿ "ಅಯ್ಯಾ, ನಿನ್ನ ಪಾಪಕ್ಕೂ ನನಗೂ ಏನು ಸಂಬಂಧ? ನಿನಗೆ ಪಾಪ ಮಾಡೆಂದು ನಾನೇನು ಹೇಳಲಿಲ್ಲ. ಆ ಪುರಾಣದಿಂದ ಏನು ಪ್ರಯೋಜನ? ನೀನು ಶಿಷ್ಯನಾಗಿರಲು ನನ್ನ ಬಳಿ ಬಂದಿದ್ದೀಯೆ, ಒಳ್ಳೆಯದು. ಆದರೆ ನಿನಗೆ ಆಹಾರ—ಉಡುಗೆ—ಅಧ್ಯಯನ ಮೂರನ್ನೂ ಕೊಡಲು ನನಗೆ ಸಾಧ್ಯವಿಲ್ಲ. ಆಹಾರ—ಉಡುಗೆ ಕೊಡುತ್ತೇನೆ, ಬೇರೆ ಎಲ್ಲಿಯಾದರೂ ಅಧ್ಯಯನ ನೋಡಿಕೋ; ಇಲ್ಲ ನಿನಗೆ ಅಧ್ಯಯನ ಮಾಡಿಸುತ್ತೇನೆ, ಆಹಾರ—ಉಡುಗೆ

ನಿನ್ನ ಹಣೆ ಬರಹ. ಅಧ್ಯಯನದಿಂದ ಈ ಜನ್ಮದಲ್ಲೇ ಪ್ರಯೋಜನವಾದೀತೋ ಇಲ್ಲವೋ ನಾಸರಿಯೆ; ನಿನ್ನ ಶ್ರದ್ಧೆ, ನಿನ್ನ ವೀರ್ಯಗಳಿಂದ ಸಿದ್ಧಿಯಾಗಬೇಕೇ ವಿನಾ ನನ್ನ ಪಾಠದಿಂದ ಆಗದು. ನೋಡು, ಯೋಚನೆಮಾಡು" ಎಂದ. ಮಿಲರೇಪ "ಸ್ವಾಮಿಾ ಆಹಾರ—ಉಡುಗೆ ಬೇರೆ ಎಲ್ಲಿಯಾದರೂ ನೋಡಿಕೊಳ್ಳುತ್ತೇನೆ; ಇಲ್ಲಿ ವಸತಿ—ಅಧ್ಯಯನಕ್ಕೆ ಅವಕಾಶ ಕೊಡಿ" ಎಂದು ಹೇಳಿ ತನ್ನೊಡನೆ ತಂದಿದ್ದ ಕೆಲವು ಮಂತ್ರತಂತ್ರದ ಗ್ರಂಥಗಳನ್ನು ಮಾರ್ಪನ ಬಳಿ ಇಟ್ಟ. ಮಾರ್ಪ ರೇಗಿ ಅವುಗಳನ್ನು ನೂಕಿ, "ಅಯ್ಯಾ, ನಿನ್ನ ಗ್ರಂಥಗಳನ್ನು ಆಚೆಗೆ ಬಿಸಾಡು, ಈ ಸ್ಥಳದಲ್ಲಿ ಅವು ಕಶ್ಮಲ ಅಷ್ಟೆ. ನನಗೆ ಅವನ್ನು ಸೋಂಕಿಸಬೇಡ" ಎಂದ.

ನಂತರ ಮಿಲರೇಪ ಮಾರ್ಪಯೋಗಿಯ ಮಠದಲ್ಲೇ ಬಿಡಾರ ಮಾಡಿದ; ಮಾರ್ಪನ ಹೆಂಡತಿ ಅವನಿಗೆ ಆಹಾರ—ಉಡುಗೆಗಳನ್ನು ಕೊಡಲು ಒಪ್ಪಿದಳು.

---

# ವಿಚಿತ್ರ ಶಿಷ್ಯವೃತ್ತಿ

ಮಿಲರೇಪ ಲ್ಹೊಬ್ರಾಕ್ ಕಣಿವೆಯಲ್ಲಿ ಅಲೆದಾಡಿ ಭಿಕ್ಷೆ ಬೇಡುತ್ತ ನಾನ್ನೂರ ಇಪ್ಪತ್ತು ಸೇರುಗಳಷ್ಟು ಧಾನ್ಯವನ್ನು ಸಂಗ್ರಹಿಸಿದ. ಅದರಲ್ಲಿ ಇನ್ನೂರ ಎಂಭತ್ತು ಸೇರುಗಳಷ್ಟನ್ನು ಮಾರಿ ಒಂದು ಸುಂದರವಾದ ತಾಮ್ರದ ಪಾತ್ರೆಯೊಂದನ್ನು ಕೊಂಡ; ಇಪ್ಪತ್ತು ಸೇರುಗಳನ್ನು ಮಾರಿ ಆಹಾರ ಪದಾರ್ಥಗಳನ್ನು ಕೊಂಡ; ಉಳಿದದ್ದನ್ನು ದೊಡ್ಡ ಗಂಟುಕಟ್ಟಿ ಅದರ ಮೇಲೆ ತಾಮ್ರದ ಪಾತ್ರೆಯನ್ನಿಟ್ಟು ಎಲ್ಲವನ್ನೂ ತಲೆಯಮೇಲೆ ಹೊತ್ತು ಮಠದಕಡೆ ನಡೆದ. ದಾರಿ ಸುದೀರ್ಘವಾಗಿದ್ದು ಮಠ ಸೇರುವ ವೇಳೆಗೆ ಬಳಲಿ ಬಾಯಾರಿ ಬೇಸತ್ತು ಕಂಗಾಲಾಗಿದ್ದ. ಮಠ ಸೇರುತ್ತಲೇ 'ಉಸ್ಸಪ್ಪಾ' ಎಂದು ತನ್ನ ತಲೆಯಮೇಲಿದ್ದ ಗಂಟನ್ನು ನೆಲಕ್ಕೆ ಕುಕ್ಕಿ ಕೂತ; ಕುಕ್ಕಿದ ಶಬ್ದಕ್ಕೆ ಮಠವೇ ಗುಡುಗಿತು. ಒಳಗಿದ್ದ ಮಾರ್ಪ ಸಿಟ್ಟಿಗೆದ್ದು ಬಂದು, "ಏ, ನಿನ್ನ ಶಕ್ತಿ ಅಸಾಧಾರಣವಾದದ್ದು, ಎಲ್ಲಿಯಾದರೂ ಕುಸ್ತಿಗೆ ಹೋಗಲು ಸರಿಯಾಗಿದ್ದೀಯೆ. ಮಠ ಉರುಳಿಸಿ ನಮ್ಮನ್ನು ತೀರಿಸಿಬಿಡಲೆಂದು ನನ್ನ ಶಿಷ್ಯನಾಗಿದ್ದೀಯೋ ಹೇಗೆ? ಈ ದೆವ್ವದಂಥ ಮೂಟೆಯನ್ನು ಹೊರಗೆ ಬಿಸಾಡು!" ಎಂದು ಆರ್ಭಟಿಸಿ ಗಂಟನ್ನು ಆಚೆಗೆ ಒದ್ದು ಝಾಡಿಸಿದ; ಮಿಲರೇಪನಿಗೆ ತನ್ನ ಗುರು ತುಸು ಮುಂಗೋಪಿಯೆಂದು ತೋರಿತಾದರೂ ಅವನಲ್ಲಿದ್ದ ಶ್ರದ್ಧೆ ಸ್ವಲ್ಪವೂ ಕುಂದಲಿಲ್ಲ. ತಾಮ್ರದ ಪಾತ್ರೆಯನ್ನು ಎತ್ತಿ ತಂದು ತನ್ನ ಗುರುವಿನ ಮುಂದಿಟ್ಟು ದಕ್ಷಿಣೆಯಾಗಿ ಸ್ವೀಕರಿಸಿರೆಂದು ಪ್ರಾರ್ಥಿಸಿಕೊಂಡ. ಗುರು ಅದನ್ನು ಸ್ವೀಕರಿಸುತ್ತಾ ಧ್ಯಾನಮಗ್ನನಾಗಿ, "ಇದು ಶುಭವಸ್ತು, ಇದನ್ನು ನನ್ನ ಗುರು

ನರೋಪನಿಗೆ ಸಮರ್ಪಿಸುತ್ತೇನೆ" ಎಂದು ಅದನ್ನು ಪೂಜಾ ಗೃಹಕ್ಕೆ ಒಯ್ದು ಅದರ ಮೇಲೆ ನಂದಾದೀಪ ಇಟ್ಟನು.

ಕಾಲ ಕಳೆಯುತ್ತ ಬಂದರೂ ಗುರು ಪ್ರವಚನದ ಮಾತನ್ನೇ ಎತ್ತಲಿಲ್ಲ; ಕಡೆಗೆ ಮಿಲರೇಪ ಧೈರ್ಯದಿಂದ, "ಗುರುಗಳೇ, ಅಧ್ಯಾಪನಕ್ಕೆ ಕಾಲ ಒದಗಿದೆಯೇ ?" ಎಂದು ಕೇಳಿದ. ಅದಕ್ಕೆ ಮಾರ್ಪ "ಇಲ್ಲ. ಊಯ್ ಮತ್ತು ಟ್ಸಂಗ್ ಪ್ರದೇಶಗಳಿಂದ ನನ್ನ ದರ್ಶನಕ್ಕೆಂದು ಅನೇಕ ಸಂಸಾರಿಗಳು ಬರಬಯಸುತ್ತಾರೆ; ಆದರೆ ಮಾರ್ಗಮಧ್ಯೆ ಗಂಟುಕಳ್ಳರ ಹಾವಳಿ ಅತಿಯಾಗಿದೆ. ಆ ಪಾತಕಿಗಳ ಮೇಲೆ ನಿನ್ನ ಮಂತ್ರಶಕ್ತಿಯಿಂದ ಚಂಡಮಾರುತ ಬೀಸುವಂತೆ ಮಾಡು. ನಂತರ ನಿನ್ನ ಪಾಠದ ವಿಚಾರ ಆಲೋಚನೆ ಮಾಡುವ" ಎಂದನು.

ಆಗಲೆಂದು ಮಿಲರೇಪ ಆ ಪ್ರದೇಶಗಳಿಗೆ ಹೋಗಿ ಜಂಝಾವಾತದಿಂದ ದರೋಡೆಗಾರರನ್ನು ನಾಶಮಾಡಿ ಹಿಂದಿರುಗಿ ಬಂದು ಪ್ರವಚನಮಾಡಿರೆಂದು ಕೇಳಿದ. ಗುರು ಸಿಟ್ಟಾಗಿ, "ಓ, ಬಲು ಬುದ್ಧಿವಂತ! ಎಷ್ಟೋ ಕಷ್ಟಪಟ್ಟು ಪ್ರಾಣಭೀತಿಗೂ ಅಂಜದೆ ಭಾರತ ಭೂಮಿಗೆ ಹೋಗಿ ಸಂಪಾದಿಸಿಕೊಂಡು ಬಂದ ಮೋಕ್ಷ ಶಾಸ್ತ್ರವನ್ನು ನಿನ್ನ ಈ ಯಃಕಶ್ಚಿತ್ ಚಂಡಮಾರುತಗಳಿಗೆ ಮಾರುಹೋಗಿ ನಿನಗೆ ದಾನಮಾಡೆಂದು ಕೇಳುವೆಯಲ್ಲ! ಅದಲ್ಲವೆ ನಿನ್ನ ಔದ್ಧತ್ಯ! ಇರಲಿ, ಲ್ಹೊಬ್ರಾಕ್‌ನ ಗುಡ್ಡಗಾಡಿನ ಜನ ನೀಚರು, ಸಾಧುಸಂತರಿಗೆ ಅಪಚಾರಮಾಡುವುದೇ ಅವರ ಉದ್ಯೋಗ. ನಿನ್ನ ಮಂತ್ರಶಕ್ತಿ ಬಲವಾಗಿದ್ದುದೇ ಆದರೆ ಅವರಿಗೆ ಪಾಠ ಕಲಿಸು. ನಂತರ ಪಾಠ ಹೇಳುವೆ" ಎಂದ. ಆಗಲೆಂದು ಮಿಲರೇಪ ಲ್ಹೊಬ್ರಾಕ್‌ಗೆ ಹೊರಟ: ಅವನ ಮಂತ್ರದ ಮಹಿಮೆಯಿಂದ ಆ ಕಾಡು ಜನರಲ್ಲಿ ಯಾದವೀ ಕಲಹ ಶುರುವಾಗಿ ಅನೇಕಮಂದಿ ಮಡಿದು ಉಳಿದವರು ದೂರದೇಶಕ್ಕೆ

ಓಡಿದರು. ಇದನ್ನು ನೋಡಿ ಗುರು ಪ್ರಸನ್ನನಾಗಿ "ನಿನ್ನ ಮಂತ್ರಶಕ್ತಿ ನಿಜವಾಗಿ ಹಿರಿದಾದದ್ದು. ನೀನು 'ಮಹಾ ಮಾಂತ್ರಿಕ'" ಎಂದು ಹೇಳಿದ. ಆದರೆ ಮಿಲರೇಪ ತನ್ನ ಪಾಠದ ವಿಚಾರ ಎತ್ತಿದಾಗ ಮತ್ತೆ ಕೋಪಗೊಂಡೇ "ಹಾ, ಹಾ, ಸುಮ್ಮನಿರು, ಕೇಳಿದವರು ನಕ್ಕಾರು! ಈ ಮಂತ್ರತಂತ್ರ ದಂಥಾ ದುಷ್ಟ ಕರ್ಮಗಳಿಂದ ನಾನು ಪ್ರಸನ್ನನಾದೆನೆಂದು ತಿಳಿದೆಯೊ? ವಿಕರ್ಮ ಮಾಡಿ ಪಾಪ ಸಂಪಾದಿಸಿ ನನ್ನ ಬಳಿ ಪಾಠ ಕೇಳಲು ಬರುತ್ತೀಯೆ, ನಾಚಿಕೆಯಾಗದೆ ನಿನಗೆ? ಮಂತ್ರ ದಲ್ಲಿ ಅಂಥ ಶಕ್ತಿ ಇದ್ದಲ್ಲಿ, ನಿನ್ನ ಪಾಪಗಳಿಗೆ ಪ್ರಾಯಶ್ಚಿತ್ತ ರೂಪವಾಗಿ ನೀನು ನಾಶಮಾಡಿದ್ದನ್ನೆಲ್ಲ ನಿಲ್ಲಿಸು. ಹಾಗೆ ಮಾಡಿದೆಯಾದರೆ ನಿನಗೆ ಅಧ್ಯಾಪನ ಮಾಡುತ್ತೇನೆ" ಎಂದು ಹೇಳಿ ಬಾಯಿಗೆ ಬಂದಂತೆಲ್ಲ ಬಯ್ದು ಹೊರಗೆ ನೂಕಿದ. ಮಿಲರೇಪನಿಗೆ ದಿಗ್ಭ್ರಮೆಯಾಯಿತು, ಏನು ಮಾಡಲೂ ತೋಚ ಲಿಲ್ಲ. ಆರ್ತನಾಗಿ ಅಳುತ್ತ ಕೂತ. ಆಗ ಗುರುಪತ್ನಿ ಬಂದು ಸಮಾಧಾನಮಾಡಲೆಣಿಸಿದಳು.

ಮರುದಿನ ಬೆಳಗ್ಗೆ ಗುರು ಬಂದು, "ಮಿಲರೇಪ, ನಿನ್ನೆ ನನ್ನ ಮನೋವೃತ್ತಿ ಸ್ವಲ್ಪ ಕಠಿನವಾಗಿತ್ತಲ್ಲವೆ? ಅದಕ್ಕಾಗಿ ನೊಂದು ಗೊಳ್ಳದಿರು. ತಾಳ್ಮೆಯಿರಲಿ, ಶ್ರದ್ಧೆಯಿರಲಿ, ನಿನಗೆ ಅಧ್ಯಾಪನ ಮಾಡುತ್ತೇನೆ. ನಿನ್ನನ್ನು ನೋಡಿದರೆ, ಕೆಲಸಗಾರನೆಂದು ಕಾಣುತ್ತೀ. ನನ್ನ ಮಗ ಡಮ-ಡೊಡೇಗೆ ಮನೆ ಕಟ್ಟಿಸಿಕೊಡುವ ಆಲೋಚನೆ ಮಾಡಿದ್ದೇನೆ. ನೋಡು, ಆ ಮನೆ ಕಟ್ಟಿಕೊಡು; ನಿನಗೆ ಮೋಕ್ಷಶಾಸ್ತ್ರವನ್ನು ಪಾಠ ಹೇಳುವುದಲ್ಲದೆ, ನಿನ್ನ ಊಟ-ಉಡುಗೆಗಳ ಸೌಲಭ್ಯವನ್ನೂ ಇಲ್ಲೇ ಕಲ್ಪಿಸಿಕೊಡು ತ್ತೇನೆ" ಎಂದನು. ಮಿಲರೇಪ ಗತ್ಯಂತರವಿಲ್ಲದೆ ಆಗಲೆಂದು ಒಪ್ಪಿ ಮನೆ ಕಟ್ಟುವ ಸ್ಥಳ ತೋರಿಸಿರೆಂದನು. ಮಾರ್ಪ ಗುರು ಎರಡು

ಗುಡ್ಡಗಳ ನಡುವಣ ಭೂಮಿಗೆ ಮಿಲರೇಪನನ್ನು ಒಯ್ದು ಅಲ್ಲಿ ವೃತ್ತಾಕಾರದ ಕಟ್ಟಡ ಕಟ್ಟುವಂತೆ ಹೇಳಿದನು. ಮಿಲರೇಪ ಕಟ್ಟಲು ಆರಂಭಿಸಿ ಅರ್ಧ ಮುಗಿಸುತ್ತಿದ್ದನು; ಅಷ್ಟರಲ್ಲಿ ಮಾರ್ಪ ಬಂದು "ನಾನು ನಿನಗೆ ಭೂಮಿ ತೋರಿಸಿದಾಗ ಸರಿಯಾಗಿ ಯೋಚಿಸಲಿಲ್ಲ. ಈ ಜಾಗ ಅಪ್ರಶಸ್ತವಾದದ್ದು. ಇಲ್ಲಿ ಕಟ್ಟಡ ಬೇಡ. ನೀನು ಕಟ್ಟಿರುವುದನ್ನು ಕೆಡವಿ ಕಲ್ಲು—ಮಣ್ಣು ಮುಂಚೆ ಎಲ್ಲಿತ್ತೋ ಅಲ್ಲಿಯೇ ಹಾಕಿಬಿಡು" ಎಂದನು. ಮಿಲರೇಪ ಕಟ್ಟಡ ಉರುಳಿಸಿ ಮಣ್ಣು ಕಲ್ಲುಗಳನ್ನು ಸ್ವಸ್ಥಾನಕ್ಕೆ ಸೇರಿಸಿದಮೇಲೆ ಮಾರ್ಪ ಅವನನ್ನು ಬೇರೊಂದು ಪಶ್ಚಿಮಾಭಿಮುಖವಾದ ಕಣಿವೆಗೆ ಒಯ್ದು ಅಲ್ಲಿ ಅರ್ಧ ಚಂದ್ರಾಕಾರದ ಮನೆ ಕಟ್ಟಲು ಹೇಳಿದ. ಮಿಲರೇಪ ಅರ್ಧ ಕಟ್ಟಡ ಎಬ್ಬಿಸುತ್ತಿರುವಲ್ಲಿ ಮತ್ತೆ ಮಾರ್ಪ ಅದೇ ರೀತಿ ಬಂದು ನಿಲ್ಲಿಸಿದನು.

ಮೂರನೆಯ ಬಾರಿ ಮಾರ್ಪ ಮಿಲರೇಪನನ್ನು ಉತ್ತರಾಭಿಮುಖವಾದ ಕಣಿವೆಯೊಂದಕ್ಕೆ ಕರೆದುಕೊಂಡು ಹೋಗಿ "ಮೊದಲೆರಡು ಬಾರಿ ಸರಿಯಾಗಲಿಲ್ಲ; ಈ ಸಾರಿ ಒಳ್ಳೆಯದೊಂದು ಮನೆ ಇಲ್ಲಿ ಕಟ್ಟಿಬಿಡು" ಎಂದು ಹೇಳಿದನು. ಮಿಲರೇಪ ಮೊಂಡು ಧೈರ್ಯದಿಂದ, "ಸ್ವಾಮಿ, ಈಗಲೇ ಎಲ್ಲ ವಿಚಾರಗಳನ್ನೂ ಯೋಚಿಸಿ ಖಚಿತ ನಿರ್ಧಾರಕ್ಕೆ ಬನ್ನಿ. ಇಲ್ಲವಾದರೆ ಮೊದಲಿನಂತೆ ನಿಮಗೆ ವ್ಯರ್ಥವ್ಯಯ, ನನಗೆ ವೃಥಾ ಶ್ರಮವಾದೀತು" ಎಂದ. ಮಾರ್ಪ "ಇಲ್ಲ, ಇಲ್ಲ, ಈ ಸಾರಿ ಯುಕ್ತ ನಿರ್ಧಾರಕ್ಕೆ ಬಂದಿದ್ದೇನೆ. ಇದು ತಾಂತ್ರಿಕ ಗುಹ್ಯಮಂದಿರವಾಗಬೇಕು, ಅದು ಕಾರಣ ಕಟ್ಟಡ ತ್ರಿಕೋಣಾಕಾರದಲ್ಲಿರಲಿ" ಎಂದು ಹೇಳಿ ಹೊರಟುಹೋದ. ಹಾಗೆಯೇ ಆಗಲೆಂದ ಮಿಲರೇಪ ತ್ರಿಕೋಣಾಕಾರದ ಕಟ್ಟಡ ಕಟ್ಟಲು ಆರಂಭಿಸಿ ಮುಕ್ಕಾಲು ಪಾಲು ಮುಗಿಸಿದನು. ಅಷ್ಟರಲ್ಲಿ ಮಾರ್ಪ ಬಂದು, "ಏ, ನಿನಗೆ

ಕಟ್ಟಡ ಹೀಗೆ ಕಟ್ಟಲು ಯಾರು ಹೇಳಿದರು ?" ಎಂದು ಗದರಿಸಿದ. ಮಿಲರೇಪ ಬೆಚ್ಚಿಬಿದ್ದು, "ಇದೇನು ಗುರುಗಳೇ, ಇದು ತಮ್ಮ ಮಗನಿಗಾಗಿ ಕಟ್ಟುತ್ತಿರುವ ಮನೆಯಲ್ಲವೆ? ಇದು ತ್ರಿಕೋಣ ವಾಗಿರಲೆಂದು ತಾವೇ ಹೇಳಲಿಲ್ಲವೆ?" ಎಂದು ಕೇಳಿದನು. ಮಾರ್ಪ "ಹಾಗೆ ಹೇಳಿದಂತೆ ನೆನಪಿಲ್ಲ. ಹಾಗೆ ಹೇಳಿದ್ದರೆ ಯಾವುದೋ ಉನ್ಮತ್ತಾವಸ್ಥೆಯಲ್ಲಿರಬೇಕು ಅಷ್ಟೇ" ಎಂದ. ಮಿಲರೇಪ "ಇಲ್ಲ ಸ್ವಾಮಿ, ಹಾಗೆ ಹೇಳಿದಾಗ ತಾವು ಸ್ತಿಮಿತಚಿತ್ತವೃತ್ತಿಯಲ್ಲೇ ಇದ್ದಿರಿ" ಎಂದನು. ಮಾರ್ಪ ಸಿಟ್ಟಿಗೆದ್ದು, "ಅದಕ್ಕೆ ಸಾಕ್ಷಿ ಯಾರಯ್ಯಾ? ಅಬದ್ಧ ಹೇಳುತ್ತೀಯಾ? ಇದೇನಿದು, ಮಂತ್ರ-ಮಾಟ ಮಾಡುವವರು ಇರುವ ಮೂರು ಮೂಲೆಯ ಅವಲಕ್ಷಣ ಕಟ್ಟಡ! ನನ್ನ ವಂಶವನ್ನು ನಿರ್ನಾಮಮಾಡಲು ಬಂದ ಯಮಶಿಷ್ಯನಂತೆ ಕಾಣುತ್ತೀಯಲ್ಲಾ! ನಾನೇನು ನಿನ್ನ ಚಿಕ್ಕಪ್ಪನೇ? ನಿನ್ನ ಪಿತ್ರಾರ್ಜಿತ ಸ್ವತ್ತನ್ನು ಅಪಹರಿಸಿದ್ದೇನೆಯೆ? ನನ್ನ ವಿರುದ್ಧ ನಿನ್ನ ಮಂತ್ರ ಶಕ್ತಿ ತಿರುಗಿಸಲು ಹವಣಿಸುತ್ತಿರುವೆಯಲ್ಲ! ನಿನಗೆ ಮೋಕ್ಷ ಶಾಸ್ತ್ರದಲ್ಲಿ ಇಚ್ಛೆಯಿದ್ದರೆ, ಇಗೋ, ಈ ದುರ್ಗೃಹವನ್ನು ಮೊದಲು ಉರುಳಿಸಿಬಿಡು" ಎಂದು ಹಾರಾಡಿ ಕೋಪದಿಂದ ಹೊರಟುಹೋದನು. ಬಹಳ ಹೊತ್ತು ಮಿಲರೇಪ ಚಿಂತಿಸುತ್ತ ಚಿಂತಿಸುತ್ತ ನಿಂತಿದ್ದು ವಿಧಿಯಿಲ್ಲದೆ ತಾನು ಕಟ್ಟುತ್ತಿದ್ದ ಮನೆಯನ್ನು ಪೂರಾ ನೆಲಸಮ ಮಾಡಿದನು. ಅಸಹಾಯನಾಗಿ ಮನೆ ಕಟ್ಟುತ್ತಿದ್ದ ಮಿಲರೇಪನಿಗೆ ಕಲ್ಲು-ಮಣ್ಣು ಅಲ್ಲಿಂದಿಲ್ಲಿಗೆ ಒಯ್ಯುವ ಭರಾಟೆಯಲ್ಲಿ ಬೆನ್ನಮೇಲೆ ವ್ರಣಗಳಾಗಿ ಕೀವು ತುಂಬಿಕೊಂಡಿದ್ದವು. ಗುರುವಿಗೆ ಹೇಳಿದರೆ ಎಲ್ಲಿ ಆ ದುರ್ವಾಸ ಮತ್ತಷ್ಟು ಸಿಟ್ಟಿಗೆದ್ದಾನೋ ಎಂದು ಅಂಜಿ ಬಾಧೆಯನ್ನು ಒಳಗೇ ಅನುಭವಿಸುತ್ತಿದ್ದನು. ಗುರುಪತ್ನಿ ಮಿಲರೇಪನ ವಿಚಾರ

ದಲ್ಲಿ ತುಂಬ ವಿಶ್ವಾಸವಾಗಿದ್ದರೂ ಮಿಲರೇಪ ಅವಳಿಗೂ ತನ್ನ ಬಾಧೆಯನ್ನು ತಿಳಿಸಲಿಲ್ಲ. ತನಗೆ ಅಧ್ಯಾಪನ ಮಾಡಲು ಗುರುವನ್ನು ಪ್ರೇರಿಸುವಂತೆ ಮಾತ್ರ ಅವಳಿಗೆ ಪದೇ ಪದೇ ಹೇಳುತ್ತಿದ್ದ.

ನಡೆದ ಸಂಗತಿ ಗುರುಪತ್ನಿಗೆ ತಿಳಿಯಲು ಆಕೆ ಮಾರ್ಪನ ಬಳಿ ಹೋಗಿ, "ಏನಿದು, ಆ ಬಡ ಹುಡುಗನನ್ನು ಹಾಗೆ ಪೀಡಿಸುತ್ತೀರಿ ? ಬಂದ ಶಿಷ್ಯನಿಗೆ ಪಾಠ ಹೇಳಿ ಕಳಿಸಬಾರದೆ ? " ಎಂದಳು. "ಆಗಲಿ, ರುಚಿಯಾದ ಅಡುಗೆ ಮಾಡು, ಅವನನ್ನು ಇಲ್ಲಿಗೆ ಕಳಿಸು" ಎಂದ ಮಾರ್ಪ. ಮಿಲರೇಪ ಬಂದಾಗ, "ಅಯ್ಯಾ, ನನ್ನನ್ನು ಅಕಾರಣವಾಗಿ ದೂಷಿಸಬೇಡ. ನಿನ್ನ ಮನೆ ಕಟ್ಟುವ ರಾದ್ಧಾಂತ ನನಗೊಂದೂ ತಿಳಿಯದು. ಇಗೋ, ಪಾಠ ಹೇಳುತ್ತೇನೆ, ಕೂಡು" ಎಂದು ಅವನಿಗೆ ತ್ರಿಶರಣ ಮಂತ್ರಗಳನ್ನೂ, ಪ್ರಣಿಧಿಗಳನ್ನೂ ಉಪದೇಶಿಸಿದನು. ನಂತರ, "ಇದು ಅವರವಾದ ಜ್ಞಾನ, ಇದರಿಂದ ಐಹಿಕ ಫಲ ಅಷ್ಟೆ. ನಿನಗೆ ಪರಮಜ್ಞಾನ ಬೇಕೆಂದರೆ ಅದು ಅತ್ಯಂತ ಶ್ರಮ ಸಾಧ್ಯ, ನಿನಗೆ ಅದು ಲಭಿಸುವುದು ಸಂಶಯಾಸ್ಪದವೇ," ಎಂದು ಹೇಳಿ ತನ್ನ ಗುರು ನರೋಪ ಈ ಜ್ಞಾನಸಾಧನೆಗೆ ಪಟ್ಟ ಕಷ್ಟ-ನಿಷ್ಠುರ ಪರಂಪರೆಯ ಕಥೆಯನ್ನು ವಿವರಿಸಿದನು. ಮಿಲರೇಪನಿಗೆ ಶ್ರದ್ಧೆ ಅಂಕುರಿಸಿ ಆಳವಾಯಿತೇ ವಿನಾ ಧೈರ್ಯ ಕುಂದಲಿಲ್ಲ; ಮನಸ್ಸಿನಲ್ಲೇ ಸಂಕಲ್ಪ ಮಾಡಿಕೊಂಡ, ಎಷ್ಟೇ ಕಷ್ಟವಾದರೂ ಸಿದ್ಧಿಯನ್ನು ಮುಟ್ಟಿಯೇ ತೀರುವೆನೆಂದು.

ಇದಾದ ಕೆಲವು ದಿನಗಳ ನಂತರ ಒಂದು ಸಂಜೆ ಮಿಲರೇಪನನ್ನು ಜತೆಯಲ್ಲಿ ಕರೆದುಕೊಂಡು ಮಾರ್ಪ ತಿರುಗಾಡಲು ಹೊರಟು ಕಣಿವೆಯ ತೀರ ಪ್ರದೇಶವೊಂದಕ್ಕೆ ಬಂದನು. ಆ ಜಾಗವನ್ನು ತೋರಿಸಿ ಮಾರ್ಪ ಮಿಲರೇಪನಿಗೆ "ಅಯ್ಯಾ, ಈ ಪ್ರದೇಶದಲ್ಲಿ ಒಂಭತ್ತು ಮಹಡಿಗಳಿರುವ ಒಂದು ಚಚ್ಚೌಕವಾದ

ಮನೆಯನ್ನು ಕಟ್ಟು ; ಅದರ ಮೇಲೆ ಅಲಂಕಾರದ ಮಳಿಗೆಯಿರಲಿ; ಈ ಮನೆಯನ್ನು ಅರ್ಧಕ್ಕೆ ನಿಲ್ಲಿಸುವುದಿಲ್ಲ, ಉರುಳಿಸುವುದಿಲ್ಲ. ನಿನಗೆ ಪರಮಜ್ಞಾನವನ್ನು ಬೋಧಿಸುವುದಲ್ಲದೆ ನಿನ್ನ ಸಾಧನೆಯ ಕಾಲದಲ್ಲಿ ನಿನ್ನ ಜೀವನದ ಪಾಥೇಯವನ್ನು ನೋಡಿಕೊಳ್ಳು ತ್ತೇನೆ" ಎಂದ. ಅದಕ್ಕೆ ಮಿಲರೇಪ, "ಗುರುಗಳೇ, ಮೊದಲ ನೆಯ ಬಾರಿ ಮನೆಕಟ್ಟಿದಾಗ ಸರಿಯಾಗಿ ಆಲೋಚಿಸಲಿಲ್ಲವೆಂದು ನಿಲ್ಲಿಸಿದಿರಿ; ಎರಡನೆಯ ಬಾರಿಯೂ ಹಾಗೆಯೇ ಆಯಿತು; ಮೂರನೆಯಬಾರಿ ನಿಮಗೆ ಹೇಳಿದುದೇ ನೆನಪಿರಲಿಲ್ಲವೆಂದಿರಿ, ಹೇಳಿದುದಕ್ಕೆ ಸಾಕ್ಷಿ ಯಾರೆಂದಿರಿ? ಅದುಕಾರಣ ಈ ಬಾರಿ ನಮ್ಮ ಗುರುಪತ್ನಿಯನ್ನು ಕರೆಸೋಣ" ಎಂದು ವಿಜ್ಞಾಪಿಸಿ ಕೊಂಡ. ಗುರು "ಅದಕ್ಕೇನು, ಅವಳನ್ನು ಕರೆತಾ" ಎಂದಾಗ ಮಿಲರೇಪ ಹೋಗಿ ಗುರುಪತ್ನಿಯನ್ನು ಕರೆತಂದು ವಿಚಾರ ವಿನಿ ಮಯ ಮಾಡಿದ. ಆಕೆ "ನಾನೇನೋ ಸಾಕ್ಷಿಯಾಗಿ ನಿಲ್ಲು ತ್ತೇನೆ. ಆದರೆ ಇಂಥದೊಂದೂ ನಿನ್ನ ಗುರುವಿನ ಬಳಿ ಪ್ರಯೋ ಜನಕ್ಕೆ ಬಾರದು. ಈಗ ಮೂರು ಮನೆ ಕಟ್ಟಿಸಿ ಕೆಡವಿದುದು ನಿನಗೆ ವ್ಯರ್ಥಶ್ರಮ. ಈ ಬಾರಿ ಈ ಜಾಗ ನಮ್ಮದಲ್ಲ, ನಮ್ಮ ದಾಯಾದಿಗಳದ್ದು. ಇಲ್ಲಿ ನಾವು ಮನೆ ಕಟ್ಟಿದರೆ ಅವರು ಜಗ ಳಕ್ಕೆ ಬಾರರೆ? ನನ್ನ ಮಾತೆಂದರೆ ನಿನ್ನ ಗುರುವಿಗೆ ಗಣನೆಯಿಲ್ಲ" ಎಂದಳು. ಗುರು "ನಿನ್ನನ್ನು ಕರೆಸಿದುದು ನನ್ನ ಮಾತಿಗೆ ಸಾಕ್ಷಿ ನಿಲ್ಲಲು, ಅಷ್ಟು ಮಾಡಿ ಹೋಗದೆ ಈ ಅಧಿಕ ಪ್ರಸಂಗ ಏಕೆ?" ಎನ್ನಲು ಆಕೆ ಸಾಕ್ಷಿ ನಿಂತು ಮನೆಗೆ ಮರಳಿದಳು.

ಮಿಲರೇಪ ಮನೆಕಟ್ಟಲು ಆರಂಭಿಸಿ ತಳಪಾಯ ತೋಡಿದ. ಅವನು ಕಲ್ಲು ತರಲು ಯೋಚಿಸುತ್ತಿರುವಲ್ಲಿ ಮಾರ್ಪನ ಮೂರು ಜನ ಪ್ರಬುದ್ಧ ಶಿಷ್ಯರು ತಮಾಷೆಗೆಂದು ದೂರದಿಂದ ಒಂದು ದೊಡ್ಡ ಬಂಡೆಯನ್ನು ಎತ್ತಿ ತಂದು ಈ ಪ್ರದೇಶದಲ್ಲಿ ಹಾಕಿ

ಹೋದರು. ಮಿಲರೇಪ ಈ ಬಂಡೆ ದೈವದತ್ತವೆಂಬಂತೆ ಅನಾಯಾಸವಾಗಿ ಸಿಕ್ಕಿತೆಂದು ಸಂತಸದಿಂದ ಅದನ್ನು ತಳಪಾಯಕ್ಕೆ ಹಾಕಿ ಮೇಲೆ ಪ್ರಾಂಗಣ ಕಟ್ಟಿ ಎರಡನೆಯ ಅಂತಸ್ತು ಎಬ್ಬಿಸುತ್ತಿದ್ದ. ಮಾರ್ಪ ಒಂದು ಬಾರಿ ಪರಿಶೀಲನೆಗೆಂದು ಬಂದು ಅಲ್ಲಲ್ಲಿ ನೋಡುತ್ತ ತಳಪಾಯಕ್ಕೆ ಹಾಕಿದ್ದ ಬಂಡೆಯನ್ನು ನೋಡಿ, "ಅಯ್ಯಾ, ಈ ಬಂಡೆ ಎಲ್ಲಿ ಸಿಕ್ಕಿತು?" ಎಂದು ಪ್ರಶ್ನಿಸಿದ. ಮಿಲರೇಪ ನಡೆದ ಸಂಗತಿ ಹೇಳಲು, "ಓ ಹಾಗೇನು? ಅವರು ತಂದ ಬಂಡೆಯನ್ನು ನೀನು ಉಪಯೋಗಿಸಿಕೊಳ್ಳಲು ನಿನಗೆ ಅಧಿಕಾರ ಎಲ್ಲಿಯದು? ಮುಂಚೆ ಆ ಬಂಡೆಯನ್ನು ತೆಗೆದು ಎಲ್ಲಿತ್ತೋ ಅಲ್ಲಿ ಸೇರಿಸು" ಎಂದ. ಮಿಲರೇಪ "ಸ್ವಾಮಿ, ಈ ಬಾರಿ ಕಟ್ಟಿದ ಮನೆಯನ್ನು ಕೆಡವಿಸುವುದಿಲ್ಲವೆಂದು ವಾಗ್ದಾನ ಮಾಡಿದ್ದಿರಿ" ಎನ್ನಲು ಮಾರ್ಪ, "ಹೌದಯ್ಯಾ ಆದರೆ ನನ್ನ ಮೂರು ಜನ ಶಿಷ್ಯರು ಪ್ರಬುದ್ಧರು, ಅವರಿಂದ ಕೆಲಸ ತೆಗೆಯೆಂದು ನಿನಗೆ ಹೇಳಿದ್ದೆನೆ? ಈಗಲೂ ನಿನ್ನ ಕಟ್ಟಡವನ್ನು ಕೆಡವೆಂದು ನಾನೇನು ಹೇಳಲಿಲ್ಲ. ಆ ಬಂಡೆಯನ್ನು ತೆಗೆಯೆಂದು ಮಾತ್ರ ಹೇಳಿದೆ" ಎಂದನು. ತಳಪಾಯ ಕಿತ್ತರೆ ಕಟ್ಟಡ ನಿಂತೀತೆ? ವಿಧಿಯಿಲ್ಲದೆ ಮಿಲರೇಪ ಕಟ್ಟಡವನ್ನು ಉರುಳಿಸಿ ಬಂಡೆಯನ್ನು ಅತಿ ಪ್ರಯಾಸದಿಂದ ಎತ್ತಿ ಅದು ಮುಂಚೆ ಇದ್ದ ಜಾಗಕ್ಕೆ ಜರುಗಿಸಿದ. ಇದನ್ನು ನೋಡುತ್ತ ನಿಂತಿದ್ದ ಮಾರ್ಪ, "ಆ, ಈಗ ನೀನು ಆ ಬಂಡೆಯನ್ನು ತಂದು ತಳಪಾಯಕ್ಕೆ ಉಪಯೋಗಿಸಿಕೊ, ಅಧಿಕಾರ ಕೊಡುತ್ತೇನೆ" ಎಂದ. ಮಿಲರೇಪ ಮೂರು ಮಂದಿ ಸಾಹಸದಿಂದ ಎತ್ತಿ ತಂದಿದ್ದ ಬಂಡೆಯನ್ನು ಒಬ್ಬನೇ ಬೆವರು ಸುರಿಸಿ ಬೆನ್ನು ಮುರಿದು ತಂದು ತಳಪಾಯಕ್ಕೆ ಹಾಕಿ ಪುನಃ ಕಟ್ಟಡ ಎಬ್ಬಿಸಿದ. ಏಳಂತಸ್ತಿನ ಇಡೀ ಕಟ್ಟಡವನ್ನು ನಿಸ್ಸಹಾಯನಾಗಿ ಒಬ್ಬನೇ ಕಟ್ಟಿ ಮುಗಿಸಿದ.

ಈಗ ಗುರು ಪ್ರಸನ್ನನಾಗಿದ್ದಾನೆಂದು ಬಗೆದು, ಮಿಲರೇಪ ಗುರುವಿನ ಬಳಿ ಬಂದು, "ಸ್ವಾಮಿ ಇನ್ನಾದರೂ ಉಪದೇಶ ಮಾಡುವಿರಾ?" ಎಂದು ವಿನೀತನಾಗಿ ಬೇಡಿಕೊಂಡ. ಮಾರ್ಪ "ಉಪದೇಶ ಮಾಡುತ್ತೇನೆ, ಆದರೆ ಗುರುದಕ್ಷಿಣೆಯೆಲ್ಲಿ?" ಎಂದ. ಅದಕ್ಕೆ ಮಿಲರೇಪ "ಸ್ವಾಮಿ, ಗುರುಪುತ್ರನಿಗೆಂದು ಒಂಭತ್ತು ಅಂತಸ್ತಿನ ಭಾರಿ ಭವನವನ್ನು ಏಕಾಂಗಿಯಾಗಿ ನಿರ್ಮಿಸಿದ್ದೇನೆ, ಅದಕ್ಕೆ ನನ್ನ ದೇಹದ ಬಲವನ್ನೆಲ್ಲ ತೇಯಿದ್ದೇನೆ. ಅದು ಗುರುದಕ್ಷಿಣೆಯಾಗದೆ?" ಎನ್ನಲು ಮಾರ್ಪ ಕೋಪಗೊಂಡು, "ಆ ಏನು ಶಾಠ್ಯ, ಏನು ಜಲ್ಪ! ಕೆಲವಡಿ ಮಣ್ಣುಗೋಡೆ ಎಬ್ಬಿಸಿದುದರಿಂದ ನಿನಗೆ ಯೋಗ್ಯತೆ ಬಂದುಬಿಟ್ಟಿತೆ? ನನ್ನ ಜ್ಞಾನವನ್ನು ಭಾರತದೇಶದಿಂದ ಪಡೆಯಲು ನಾನು ಪಟ್ಟ ಶ್ರಮ ನಿನಗೆ ಗೊತ್ತೆ? ಆದರ ನೂರರಲ್ಲಿ ಒಂದು ಪಾಲಿಲ್ಲ ನಿನ್ನ ಸಾಹಸ! ನಿನ್ನ ಪ್ರತಿಷ್ಠೆಯನ್ನು ಸಾಕುಮಾಡು" ಎಂದು ಒಯ್ದು ಹೊಡೆದು ಒದ್ದು ಹೊರಗೆ ನೂಕಿಬಿಟ್ಟನು.

---

# ಗುರುಪತ್ನಿಯ ಅನುಕಂಪ

ಮಿಲರೇಪನಿಗೆ ಆಕಾಶವೇ ಕಳಚಿಬಿದ್ದಂತಾಯಿತು; ಜೀವನದ ಧ್ಯೇಯವೆಲ್ಲ ನುಚ್ಚುನುರಿಯಾದಂತೆ ಭಾಸವಾಯಿತು. ಇದಕ್ಕಿಂತ ಮರಣವೇ ಲೇಸೆಂದು ದಿಕ್ಕೆಟ್ಟು ಅಳಲು ಮೊದಲಿಟ್ಟ. ಆಗ ಗುರುಪತ್ನಿ ಬಂದು ವೈದಡವಿ ಎದೆಗುಂದದಿರೆಂದು ಸಂತೈಸಿದಳು. ಮರುದಿನ ಬೆಳಗಿನಲ್ಲೇ ಗುರು ಮಿಲರೇಪನ ಬಳಿ ಬಂದು—"ಆದದ್ದಾಯಿತು, ನೀನು ಕಟ್ಟುತ್ತಿರುವ ಕಟ್ಟಡ ಅಷ್ಟೇ ಸಾಕು. ಅದರ ಪಕ್ಕದಲ್ಲಿ ಹನ್ನೆರಡು ಕಂಬಗಳುಳ್ಳ ಸಭಾಭವನವೊಂದನ್ನು ಆರಂಭಿಸು. ಅದು ಮುಗಿದೊಡನೆಯೇ ನಿನಗೆ ಉಪದೇಶ ಮಾಡುತ್ತೇನೆ, ಖಂಡಿತ" ಎಂದು ಹೇಳಿದ. ಸರಿ, ಮಿಲರೇಪ ಮತ್ತೆ ತಳಪಾಯ ತೋಡಿ ಮನೆಕಟ್ಟಲು ತೊಡಗಿದ. ಗುರುಪತ್ನಿಯೇ ಅವನಿಗೆ ಆಹಾರ ಪಾನೀಯಗಳನ್ನು ತಂದುಕೊಟ್ಟು ಉಪಚರಿಸುತ್ತ ಇದ್ದಳು.

ಈ ಮನೆ ಮುಗಿಯುತ್ತ ಬಂದಂದು ದ್ಪ್ಯಾಲ್ ಪ್ರದೇಶದ ಕ್ನುಟ್ಪ್ರೋನ್ ವಂಗ್ಗೆ ಎಂಬ ಶಿಷ್ಯ ಮಾರ್ಪನ ಬಳಿ ಮುಂಡಲದ ಸಿದ್ಧೋಪದೇಶಕ್ಕೆಂದು ಬಂದ. ಸಂದರ್ಭದ ಔಚಿತ್ಯವನ್ನರಿತು ಗುರುಪತ್ನಿ—"ಮಗು ಮಿಲರೇಪ, ಈ ಬಾರಿಯಾದರೂ ನಿನಗೆ ಉಪದೇಶ ಸಿಗುವಂತೆ ಮಾಡುವೆ"—ಎಂದು ಹೇಳಿ ಅವನ ಗುರುದಕ್ಷಿಣೆಯ ಸಲುವಾಗಿ ಬೆಣ್ಣೆಯ ಮುದ್ದೆ, ಒಂದು ಶಾಲು, ಒಂದು ತಾಮ್ರದ ಗಿಂಡಿ ಇಷ್ಟನ್ನು ಕೊಟ್ಟು ಅಂದಿನ ಉಪದೇಶಕ್ಕೆಂದು ನಿಯುಕ್ತರಾದ ಶಿಷ್ಯರ ನಡುವೆ ಕೂರಿಸಿದಳು. ಮಾರ್ಪ ಮಿಲರೇಪನನ್ನು ಕಂಡೊಡನೆ—"ಏನಯ್ಯಾ ಮಹಾ ಮಾಂತ್ರಿಕ, ಗುರುದಕ್ಷಿಣೆ ಏನು ತಂದಿದ್ದೀ?"—ಎಂದು

ಕೇಳಿದ. ಮಿಲರೇಪ ಎದ್ದು ತನ್ನ ಬಳಿ ಗುರುಪತ್ನಿ ಕೊಟ್ಟಿದ್ದ ವಸ್ತುಗಳನ್ನೆಲ್ಲ ಮಾರ್ಪನ ಮುಂದಿಟ್ಟನು. ಗುರು ಅದನ್ನು ನೋಡಿ,—"ಎಲ, ಈ ಎಲ್ಲ ನನಗೆ ಸೇರಿದ್ದೇ! ನಿನ್ನದೆನ್ನುವ ಯಾವೊಂದು ವಸ್ತುವನ್ನಾದರೂ ಗುರುದಕ್ಷಿಣೆಗೆ ತಾ"— ಎಂದು ಹೇಳಿ, ಕ್ರುದ್ಧನಾಗಿ ಹೊಡೆದು ಹೊರಗೆ ನೂಕಿಬಿಟ್ಟನು.

ಮಿಲರೇಪನಿಗೆ ಮತ್ತೆ ಅಧೈರ್ಯದ ಮಹಾ ಸಮುದ್ರದ ಅರಿವಾಯಿತು; ಅಳುತ್ತ ನಿಂತಿದ್ದಾಗ ಅವನಿಗನಿಸಿತು— "ಮಂತ್ರ ವಿದ್ಯೆಯಿಂದ ಅನೇಕ ಜೀವಿಗಳ ಇರವಿಗೆ, ಸ್ವಾಸ್ಥ್ಯಕ್ಕೆ ಸಂಚಕಾರ ತಂದೆನಲ್ಲವೆ? ಆ ದುಷ್ಕರ್ಮಗಳ ಪರಿಪಾಕ ನನ್ನನ್ನು ಹೀಗೆ ಕಾಡುತ್ತಿರಬಹುದೆ? ಅಥವಾ ನಾನು ಮೋಕ್ಷ ಮಂತ್ರಕ್ಕೆ ಅಧಿಕಾರಿಯಲ್ಲವೆಂದು ಗುರು ಕಂಡುಕೊಂಡಿರ ಬಹುದೆ? ಅಥವಾ ಗುರುವಿಗೆ ನನ್ನಲ್ಲಿ ತಾತ್ಸಾರ ಬುದ್ಧಿಯೆ? ಹೇಗೂ, ಧರ್ಮ ಬಾಹಿರವಾದ ಬದುಕು ನಿರರ್ಥಕ. ಇದೀಗ ನನ್ನ ಪ್ರಾಣ ನೀಗಿಕೊಳ್ಳುವೆ—" ಎಂದು ನಿರ್ಧರಿಸುತ್ತಿರುವಲ್ಲೇ ಗುರುಪತ್ನಿ ಬಂದು ಎಂದಿನಂತೆ ಖಾದ್ಯಪಾನೀಯಗಳನ್ನು ಕೊಟ್ಟು ಸಂತೈಸ ತೊಡಗಿದಳು. ಆದರೆ ಬಾಳಿನಲ್ಲಿ ಮಹಾ ಜುಗುಪ್ಸೆ ಹೊಂದಿದ್ದ ಮಿಲರೇಪ ಆ ರಾತ್ರಿಯೆಲ್ಲ ಆರ್ತನಾಗಿ ಅಳುತ್ತ ಕುಳಿತಿದ್ದು ಮರುದಿನ ಮತ್ತೆ ಮನೆ ಕಟ್ಟುವ ಕೆಲಸದಲ್ಲಿ ನಿರತನಾದನು. ಹೀಗೆ ಕೆಲಸ ಮಾಡುತ್ತಿರುವಲ್ಲಿ ಅವನ ಬೆನ್ನಿನಮೇಲೆ ಮತ್ತೆ ವ್ರಣಗಳಾಗಿ ರಕ್ತ ಧಾರಾಕಾರವಾಗಿ ಸುರಿಯ ಹತ್ತಿತು. ಗುರುಪತ್ನಿ ಅದನ್ನು ಕಂಡೊಡನೆ ಗುರುವಿನ ಬಳಿಗೆ ಓಡಿ ಹೋಗಿ—"ಏನಿದು ನಿಮ್ಮ ಉನ್ಮಾದ! ಊರಲ್ಲೆಲ್ಲ ಮಹಾಜ್ಞಾನಿಯೆಂದು ಹೆಸರೇನು, ವಿದ್ಯೆಗೆಂದು ಬಂದ ಬಡಪಾಯಿ ಹುಡುಗನನ್ನು ಹೀಗೆ ಕಾಡುವುದೇನು? ದಿನ ಬೆಳಗೂ ಅವನಿಂದ ಕೂಲಿಗಾರರೆಂಟು ಮಂದಿಯ ಕೆಲಸ

ತೆಗೆಯಿಸಿ ಅವನು ಬೇಸತ್ತು ದಣಿದು ಇನ್ನಾದರೂ ವಿದ್ಯಾದಾನವಾದೀತೋ ಎಂದು ಅಂಗಲಾಚಿದಾಗ ಬಯ್ದು ಹೊಡೆದು ನೂಕಿಬಿಡುತ್ತೀರಿ! ಈಗ ನೋಡಿ, ಕಲ್ಲು ಹೊತ್ತು ಅವನ ಬೆನ್ನ ಮೇಲೆ ಆನೆಗಾತ್ರ ವ್ರಣವಾಗಿ ರಕ್ತ ನದಿಯಂತೆ ಹರಿಯುತ್ತಿದೆ! ಇನ್ನಾದರೂ ಅವನಿಗೆ ಮಂತ್ರೋಪದೇಶ ಮಾಡಿ!"—ಎಂದು ಆಗ್ರಹ ಮಾಡಲು ಗುರು ನಿರ್ಭಾವನಾಗಿ—"ಬರೀ ಮಾತು, ಮಾತು. ಆಗಲಿ, ಅವನನ್ನು ಇಲ್ಲಿ ಕಳಿಸು"—ಎಂದನು. ಮಂತ್ರೋಪದೇಶ ಇಂದು ಆಗಿಯೇಬಿಡುವುದೆಂದು ಮೇರೆ ಮೀರಿದ ಆನಂದದಿಂದ ಮಿಲರೇಪ ಗುರುವಿನ ಬಳಿ ಬಂದೊಡನೆ ಗುರು—"ಎಲ್ಲಿ, ನಿನ್ನ ಬೆನ್ನಿನ ಗಾಯ ತೋರಿಸು" ಎಂದ. ಬಟ್ಟೆ ಬಿಚ್ಚಿ, ಮಿಲರೇಪ ರಕ್ತಗಟ್ಟಿ ಮಾಂಸ ಖಂಡ ಕಾಣುತ್ತಿದ್ದ ವ್ರಣವನ್ನು ತೋರಿಸಿದ. ಅದಕ್ಕೆ ಗುರು—"ಓಹೋ! ಇದೇನು ಮಹಾ? ನನ್ನ ಗುರು ನರೋಪ ವಿದ್ಯೆಗೆಂದು ಪಟ್ಟ ಪ್ರಯಾಸದ ಸಾವಿರದ ಒಂದು ಪಾಲು ಇಲ್ಲ ಇದು! ನನ್ನ ಗುರುವನ್ನರಸುತ್ತ ನಾನು ಪಟ್ಟ ಬವಣೆಗಳು ಗೊತ್ತೆ ನಿನಗೆ? ನಿನ್ನದೇ ದೊಡ್ಡದೆಂದು ಮಾಡುತ್ತೀಯೆ! ನಿನಗೆ ಮೋಕ್ಷಮಂತ್ರ ಬೇಕಿದ್ದರೆ ಬಾಯಿ ಮುಚ್ಚಿಕೊಂಡು ಕೆಲಸ ಮಾಡು. ಕೆಲಸಮಾಡುವಾಗ ಹಚ್ಚಡವನ್ನು ಎರಡು ಮಡಿಕೆ ಮಾಡಿ ಬೆನ್ನ ಮೇಲೆ ಹಾಕಿಕೊ, ಗಾಯಕ್ಕೆ ಮಣ್ಣು ಸೇರದು"!—ಎಂದು ಹೇಳಿದ. ಹತಾಶನಾಗಿ ಮಿಲರೇಪ ಮತ್ತೆ ಕೆಲಸಕ್ಕೆ ಹೊರಟ. ಕ್ರಮೇಣ ವ್ರಣ ರುಗ್ಣವಾಗಿ ಅವನ ದೇಹಸ್ಥಿತಿ ತೀರ ಕೆಟ್ಟು ಕೆಲಸ ಮಾಡಲಾಗದಿದ್ದಾಗ ಗುರು—"ಅಷ್ಟು ಆಲಸ್ಯವಾದರೆ ಸುಧಾರಿಸಿಕೋ, ಆದರೆ ಕೆಲಸ ಪೂರೈಸದ ವಿನಾ ಮಂತ್ರೋಪದೇಶವೇನೂ ಇಲ್ಲ, ಅದು ಖಂಡಿತ!"—ಎಂದ. ಗುರುಪತ್ನಿ ಮಮತೆಯಿಂದ ಶಿಷ್ಯನ ಶುಶ್ರೂಷೆ ಮಾಡಹತ್ತಿದಳು.

ದೇಹಸ್ಥಿತಿ ಸ್ವಲ್ಪ ಉತ್ತಮವಾದಂದೇ ಗುರು ಬಂದು "ಇನ್ನು ಕೆಲಸ ಶುರುಮಾಡು" ಎಂದು ಆದೇಶಮಾಡಿದ.

ಅವನು ಕೆಲಸಕ್ಕೆಂದು ಹೊರಡುವಲ್ಲಿ ಗುರುಪತ್ನಿ, "ಏನಾದರೊಂದು ಉಪಾಯದಿಂದ ಈ ಬಾರಿ ನಿನಗೆ ಉಪದೇಶ ಸಿಗುವಂತೆ ಮಾಡುತ್ತೇನೆ. ನೀನು ನಿನ್ನ ಸಾಮಾನುಸರಂಜಾಮು ಎಲ್ಲ ಕಟ್ಟಿಕೊಂಡು ಹೊರಡುತ್ತಿರುವವನಂತೆ ನಟಿಸು; ನಾನು ನಿನ್ನನ್ನು ಬೇಡೆಂದು ಅಡ್ಡಕಟ್ಟುವಂತೆ ನಟಿಸುತ್ತೇನೆ" ಎಂದು ಹೇಳಿಕೊಟ್ಟಳು. ಗುರು ಯಥಾವತ್ತಾಗಿ ಜಗಲಿಯಮೇಲೆ ಕೂತಿದ್ದಾಗ ಅವನ ಸಮೀಪದಲ್ಲೇ ಈ ನಾಟಕ ನಡೆಯಿತು. ಗುರು ತನ್ನಾಕೆಯನ್ನು ಕರೆದು—"ಏನಿದು ಪ್ರಹಸನ" ಎಂದು ಕೇಳಲು, ಆಕೆ "ಮಿಲರೇಪ ದೂರ ದೇಶದಿಂದ ತಮ್ಮೊಡೆಗೆ ವಿದ್ಯೆಗೆಂದು ಬಂದು ಸ್ವಾಸ್ಥ್ಯದ ಸರ್ವನಾಶವಾಗಿ ಈಗ ಬೇರೊಬ್ಬ ಗುರುವಿನ ಬಳಿ ಹೊರಟಿದ್ದಾನೆ. ನಾನು—'ಬೇಡ, ಕ್ಷಿಪ್ರದಲ್ಲೇ ನಿನ್ನಲ್ಲಿ ಗುರು ಪ್ರಸನ್ನರಾಗುವರು' ಎಂದು ಹೇಳಿ ತಡೆಯುತ್ತಿದ್ದೇನೆ" ಎಂದು ಹೇಳಿದಳು. ಗುರು ಒಡನೆಯೇ ಎದ್ದು ಮಿಲರೇಪ ಇದ್ದಲ್ಲಿಗೆ ಬಂದು ಅವನನ್ನು ಚೆನ್ನಾಗಿ ಹೊಡೆದು—"ಎಲಾ, ನೀನು ಬಂದಾಗ, ನಿನ್ನ ದೇಹ ಮನಸ್ಸು ಪ್ರಾಣ ಎಲ್ಲ ನನಗೆ ಗುರುದಕ್ಷಿಣೆಗಾಗಿ ಕೊಟ್ಟಿದ್ದೀಯೆ. ನೀನು ನನ್ನ ಗುಲಾಮ; ನಿನಗೆ ಎಲ್ಲಿ ಹೋಗುವ ಸ್ವಾತಂತ್ರ್ಯವೂ ಇಲ್ಲ!" ಎಂದು ಆರ್ಭಟಿಸಿದ.

ಮಿಲರೇಪನಿಗೆ ಏನು ಮಾಡಲೂ ದಿಕ್ಕು ತೋಚದೆ ತನ್ನ ಕೋಣೆಗೆ ಹೋಗಿ ಬಿದ್ದು ಬಿದ್ದು ಹೊರಳಾಡುತ್ತ ಅಳ ಹತ್ತಿದ. ತನ್ನ ಸನ್ನಾಹದಿಂದಲೇ ಮಿಲರೇಪನಿಗೆ ಆದ ಅಪಚಾರ ಗುರುಪತ್ನಿಯ ಹೃದಯವನ್ನು ಹಿಂಡಿತು; ಆಕೆ ಧಾವಿಸಿ ಬಂದು—"ಮಗು ಮಿಲರೇಪ! ನಿನ್ನ ಗುರುವಿಗೆ ಕರುಣೆಯೇ ಇಲ್ಲ;

ಒಂದಲ್ಲ ಒಂದು ದಿನ ನಿನಗೆ ಉಪದೇಶಮಾಡುವರು, ಅದು ನಿಜ. ಅಲ್ಲಿಯುವರೆಗೆ ನಾನೇ ಒಂದು ಮಂತ್ರೋಪದೇಶ ಮಾಡುತ್ತೇನೆ" ಎಂದು ಹೇಳಿ ಪ್ರೀತಿಯಿಂದ ವಜ್ರವಾರಾಹೀ ಮಂತ್ರವನ್ನು ವಿಧಿವತ್ತಾಗಿ ಉಪದೇಶಮಾಡಿದಳು. ಈ ಮಂತ್ರ ಮೋಕ್ಷ ಮಂತ್ರದಷ್ಟು ಪ್ರಶಸ್ತವಲ್ಲದಿದ್ದರೂ ಗುರುಪತ್ನಿಯ ಮುಖೇನ ಬಂದಿದ್ದರಿಂದ ತನ್ನ ಪಾಪ ರಾಶಿಯಲ್ಲಿ ಬಹು ಭಾಗವನ್ನು ನಿವಾರಿಸತಕ್ಕುದೆಂಬ ವಿಶ್ವಾಸದಿಂದ ಮಿಲರೇಪ ತದೇಕಧ್ಯಾನದಿಂದ ಅದನ್ನು ಅನುಸಂಧಾನ ಮಾಡಿದನು; ಅಲ್ಲದೆ ಗುರುಭಕ್ತಿಯಿಂದ ಆಕೆಯನ್ನು ಸೇವಿಸತೊಡಗಿದನು. ವರ್ತಮಾನ ಜನ್ಮದಲ್ಲೇ ತಾರಕ ವಿದ್ಯೆಯನ್ನು ಹಂಬಲಿಸುತ್ತಿದ್ದ ಮಿಲರೇಪನಿಗೆ ಬೇರೊಬ್ಬ ಗುರುವನ್ನರಸುವ ಚಪಲ ಇತ್ತು; ಆದರೆ ಅಂಥ ವಿದ್ಯಾನಿಧಿ ತನ್ನ ಗುರು ಮಾರ್ಪನೊಬ್ಬನೇ ಎಂದರಿತು ಅಸಹಾಯನಾಗಿ ತನ್ನ ಕೆಲಸಗಳಲ್ಲಿ ಯಥಾಪೂರ್ವ ನಿರತನಾದನು.

ಈ ಮಧ್ಯೆ ಇನ್ನೊಂದು ಸುಸಂಧಿ ಸನ್ನಿಹಿತವಾಯಿತು. ಚುಂಗ್ ದೇಶದ ಸ್ಗೋಗ್ಡುನ್ ಎಂಬ ಪಂಡಿತ ತನ್ನ ಶಿಷ್ಯರೊಂದಿಗೆ ಮಾರ್ಪನ ಬಳಿ ಉಪದೇಶಕ್ಕೆಂದು ಬಂದ; ಈ ಅವಕಾಶವನ್ನು ಅರಿತು ಗುರುಪತ್ನಿ ತನ್ನ ಅತಿ ಬೆಲೆಬಾಳುವ ರತ್ನ ಕಂಠೀಹಾರವನ್ನು ಮಿಲರೇಪನ ಕೈಲಿತ್ತು—"ಮಗೂ, ನಿನ್ನ ದೃಢ ಭಕ್ತಿಗೆ ಗುರು ಇನ್ನೂ ಮೆಚ್ಚಿಲ್ಲ; ಈ ಕಂಠೀಹಾರದಿಂದ ಅವರಿಗೆ ಪ್ರೀತಿಯಾಗಿ ನಿನಗೆ ಉಪದೇಶ ಮಾಡಿಯಾರೋ ಏನೋ, ಹೋಗಿ ನೋಡು"—ಎಂದು ಹೇಳಿ ಕಳುಹಿಸಿದಳು. ಮಿಲರೇಪ ಆಗಲೆಂದು ಸಭಾಭವನಕ್ಕೆ ಹೋಗಿ ಗುರುಗಳಿಗೆ ಕಂಠೀಹಾರವನ್ನು ಸಮರ್ಪಿಸಿ ಶಿಷ್ಯರ ನಡುವೆ ಕುಳಿತನು. ಗುರು ಕಂಠೀಹಾರವನ್ನೆತ್ತಿ ನೋಡುತ್ತ "ಬಲು ಚೆನ್ನಾಗಿದೆ, ಮಿಲ

ರೇಪ, ಆದರೆ ಇದು ನಿನಗೆ ಬಂದುದು ಹೇಗೆ?"—ಎಂದು ಕೇಳಿದನು. ಮಿಲರೇಪ ಗುರುಪತ್ನಿ ಕೊಟ್ಟಳೆಂದು ಹೇಳಿದ. ಗುರು ತನ್ನ ಪತ್ನಿಯನ್ನು ಕರೆದು—"ಇದು ನಮಗೆ ಹೇಗೆ ಬಂತು?" —ಎಂದು ಪ್ರಶ್ನಿಸಿದ. ಅದಕ್ಕೆ ಆಕೆ—"ಇದು ನನ್ನ ಸ್ವತ್ತು; ನನ್ನ ವಿವಾಹ ಮಂಗಲದಲ್ಲಿ ನನಗೆಂದು ಕೊಟ್ಟ ಬಳುವಳಿ. ನಿಮ್ಮ ಕೋಪ ಸ್ವಭಾವವನ್ನು ಕಂಡು ಎಂದಾದರು ನಮ್ಮ ನಡುವೆ ವಿರಸ ಬಂದಾಗ ನನ್ನ ಜೀವನ ಪಾಥೇಯಕ್ಕಿರಲೆಂದು ನನ್ನ ತಾಯಿ-ತಂದೆ ಗುಟ್ಟಾಗಿ ಕೊಟ್ಟಿದ್ದರು. ಈ ಅನಾಥ ಶಿಶು ಉಪದೇಶಕ್ಕಾಗಿ ಪಡುತ್ತಿರುವ ಬವಣೆಯನ್ನು ನೋಡಿ ತಾಳಲಾರದೆ ಅವನಿಗೆ ಕೊಟ್ಟೆ"—ಎಂದಳು. ಆದರೆ ಗುರು ಜೋರಾಗಿ ನಕ್ಕು—"ಒಳ್ಳೆಯ ಮಾತು! ನೀನು ನನ್ನವಳಾದ ಮೇಲೆ ನಿನ್ನ ಸ್ವತ್ತು ನನ್ನದಲ್ಲವೆ? ಎಲ ಮಿಲರೇಪ, ನಿನ್ನದೇನಾದರೂ ಇದ್ದರೆ ಕೊಂಡು ಬಾ, ಇಲ್ಲವಾದರೆ ಹೊರಡು"—ಎಂದು ಗಡುಸಾಗಿ ನುಡಿದನು. ಗುರುವಿನ ಮನಸ್ಸು ಕರಗೀತೆಂದು ನಿರೀಕ್ಷಿಸುತ್ತ ಮಿಲರೇಪ ಅಲ್ಲಿಯೇ ಕುಳಿತಿದ್ದನು. ಗುರು ಸಿಟ್ಟಿಗೆದ್ದು—"ಏ ಕಿವುಡ! ನಾನು ಹೇಳಿದುದು ಕೇಳಲಿಲ್ಲವೆ? ನನ್ನ ಮುಖ್ಯ ಶಿಷ್ಯರ ಮಧ್ಯೆ ಕೂರಲು ನಿನಗೆಲ್ಲಿಯ ಅಧಿಕಾರ? ತೊಲಗಾಚೆ!"—ಎಂದು ಕೂಗುತ್ತ ಬಳಿಯಿದ್ದ ದೊಣ್ಣೆಯೊಂದನ್ನು ಎತ್ತಿಕೊಂಡು ಹೊಡೆಯ ಹೊರಟನು. ಗಾಬರಿಯಿಂದ ಮಿಲರೇಪ ಎದ್ದು ಓಡಿ ಕಿಟಕಿಯಿಂದ ಹೊರಗೆ ಹಾರಿದನು.

ಮತ್ತೆ ದುರ್ಭರವಾದ ದುಃಖದಿಂದ ಬೆಂದು ಮಿಲರೇಪ ಆತ್ಮಹತ್ಯೆಯ ನಿಶ್ಚಯಮಾಡಿದನು. ಗುರುಪತ್ನಿ ತನ್ನ ಮನೆಗೆಲಸ ಎಲ್ಲ ಬಿಟ್ಟು ಅವನ ಬಳಿ ಬಂದು ಮೈದಡವಿ ಮರುಕದಿಂದ ಸಂತೈಸುತ್ತ—"ಆತ್ಮಹತ್ಯೆ ಅಶುಭ, ನಿರರ್ಥಕ. ನಿನಗೆ

ಮಂತ್ರೋಪದೇಶದಲ್ಲಿ ಅಷ್ಟು ಕಾತರ ಇದ್ದರೆ ಇನ್ನಾವ ಯೋಗ್ಯ ಗುರುವನ್ನಾದರೂ ಹುಡುಕು. ನಿನ್ನ ಮಾರ್ಗ ವ್ಯಯಕ್ಕೆ, ಗುರುದಕ್ಷಿಣೆಗೆ ನಾನು ಸಹಾಯ ಮಾಡುತ್ತೇನೆ"— ಎಂದು ಆಶ್ವಾಸನ ಮಾಡಿದಳು. ಆ ರಾತ್ರಿ ಮಿಲರೇಪ ದೀರ್ಘ ವಾಗಿ ಚಿಂತಿಸಿದ; ಹೃದಯದಲ್ಲಿ ಜಂಝಾವಾತ ಮೋಳಕೆ ಮುರಿದು ಬಡಿಯಿತು. ತನ್ನ ಧನವಿಲ್ಲದೆ ಗುರುವಿನ ಪ್ರಸಾದ ಆಗದೆ ಮೋಕ್ಷ ಇಲ್ಲ; ಈ ಮೋಕ್ಷ ಇಲ್ಲದೆ ತನ್ನ ಪಾಪಿ ಜೀವನ ನಿರರ್ಥಕ. ಬೇರೊಬ್ಬ ಗುರುವನ್ನರಸುವುದೆ? ಅಥವ ಧನ ಸಂಚಯನಕ್ಕಾಗಿ ಯಾವೊಬ್ಬ ಧನಿಕನ ಬಳಿ ಊಳಿಗ ಮಾಡು ವುದೆ? ಇಲ್ಲವೆ ಮನೆಗೆ ಮರಳಿ ತಾಯಿಯನ್ನು ನೋಡುವುದೆ? ಮಿಲರೇಪನಿಗೆ ಏನೂ ಬಗೆ ಹರಿಯಲಿಲ್ಲ. ಅಂತೂ ಇಲ್ಲಿರುವುದು ಸಾಧ್ಯವಿಲ್ಲವೆಂದು ನಿಶ್ಚಯಿಸಿ ಅದೇ ರಾತ್ರಿ ಗುರುಪತ್ನಿಗೂ ಹೇಳದೆ ಹೊರಟುಬಿಟ್ಟನು. ಐದು ಮೈಲಿ ದೂರ ಹೋದಮೇಲೆ ಅಲ್ಲಿಯ ಮುರುಕು ಹಳ್ಳಿಯಲ್ಲಿ ಸ್ವಲ್ಪ ಭಿಕ್ಷೆಬೇಡಿ ಊಟ ಮಾಡಿದ. ಆಗ ಅವನಿಗೆ—"ಇಷ್ಟು ನನ್ನನ್ನು ಪುತ್ರವಾತ್ಸಲ್ಯ ದಿಂದ ಉಪಚರಿಸುತ್ತಿದ್ದ ಗುರುಪತ್ನಿಯನ್ನು ನೋಡದೆ ಬಂದೆನಲ್ಲ! ಇದು ಸರಿಯಲ್ಲ" ಎಂದೆನಿಸಿ ಆಕೆಯನ್ನು ಕಂಡು ಹೋಗುವ ನಿಮಿತ್ತ ಹಿಂದಿರುಗಿದನು.

ದಾರಿಯಲ್ಲಿ ಒಬ್ಬ ಮುದುಕ ಅವನನ್ನು ಸಂಧಿಸಿ—"ಏ ಹುಡುಗ, ಒಳ್ಳೆ ದೃಢಕಾಯನಾಗಿದ್ದೀಯಲ್ಲ! ಭಿಕ್ಷೆ ಬೇಡಲು ನಾಚಿಕೆಯಾಗದೆ? ನಿನಗೆ ಓದಲು ಬಾದರೆ ಧರ್ಮಶಾಸ್ತ್ರ ಪಠಣಮಾಡು, ಯಾರಾದರೂ ಸಂಭಾವನೆ ಕೊಟ್ಟಾರು. ಇಲ್ಲವೆ ಮೈ ಮುರಿದು ಕೆಲಸಮಾಡಿ ಸಂಪಾದಿಸು"—ಎಂದ. ಮಿಲ ರೇಪ ತನ್ನ ಕಥೆಯನ್ನು ಹೇಳಿದ. ಅದನ್ನು ಕೇಳಿ ಆ ಮುದುಕ— "ನನ್ನ ಮನೆಗೆ ಬಾ. ದಿನವೂ ಧರ್ಮಶ್ರವಣ ಮಾಡಿಸು; ಉಚಿತ

ವಾದ ಸಂಭಾವನೆ ಕೊಡುತ್ತೇನೆ"—ಎಂದು ಹೇಳಿ ಅವನನ್ನು ತನ್ನ ಮನೆಗೆ ಒಯ್ದ. ಅಲ್ಲಿ ಲಘುಪ್ರಜ್ಞಾಪಾರಮಿತಾ ಸೂತ್ರದ ಪಾರಾಯಣ ಮಾಡುತ್ತಿರುವಲ್ಲಿ ಮಿಲರೇಪನಿಗೆ ತನ್ನ ಗುರುವಿನಲ್ಲಿ ಶ್ರದ್ಧೆ ಮತ್ತೆ ಒಲಿದು ಅವನಲ್ಲಿಗೆ ಹಿಂದಿರುಗುವ ಬಯಕೆ ಪ್ರಬಲವಾಯಿತು.

ಇತ್ತ, ಮುಂಜಾನೆ ಎದ್ದು ಗುರುಪತ್ನಿ ಮಿಲರೇಪನಿಗಾಗಿ ಎಲ್ಲೆಲ್ಲೂ ಹುಡುಕಿದಳು; ಎಲ್ಲೂ ಕಾಣದಾದಾಗ ಆಕೆ ಗುರುವಿನ ಬಳಿ ಬಂದು—"ನಿಮ್ಮ ಪರಮಶತ್ರು ಹೋಗಿಬಿಟ್ಟ! ಇನ್ನಾದರೂ ನಿಮಗೆ ಸಮಾಧಾನವೊ?"—ಎಂದಳು. ಗುರು ಹೌಹಾರಿ—"ಹಾಗಂದರೇನು?"—ಎಂದು ಕುತೂಹಲ ವಿಶಿಷ್ಟನಾಗಿ ಕೇಳಿದ. ಗುರುಪತ್ನಿ ಸುದ್ದಿ ಹೇಳಿದಾಗ ಗುರು ಮಾರ್ಪ ಕಣ್ಣೀರಿಟ್ಟು ಅಳುತ್ತಾ ಮುಖದಮೇಲೆ ಬಟ್ಟೆಹೊದ್ದು "ಓ ದೇವತೆಗಳೇ, ನನ್ನ ಪ್ರಿಯ ಶಿಷ್ಯನನ್ನು ನನಗೆ ಮರಳಿ ಕೊಡಲೊಲ್ಲಿರಾ?"—ಎಂದು ನುಡಿದು ನೀರವವಾಗಿ ಕುಳಿತನು.

ಆದರೆ ಮಿಲರೇಪ ಹಿಂದಿರುಗಿ ಬಂದು ಗುರುವಿಗೆ ನಮಸ್ಕರಿಸಿದಾಗ ಗುರು ಆಗ್ರಹವನ್ನು ಅಭಿನಯಿಸುತ್ತ—"ಅಯ್ಯಾ, ಧರ್ಮನಿಷ್ಠೆಯಲ್ಲಿ ಈ ಚಾಂಚಲ್ಯ ಸಲ್ಲದು. ನಿನಗೆ ತಾರಕ ವಿದ್ಯೆಯಲ್ಲಿ ಅನುರಾಗ ಇದ್ದದ್ದೇ ಆದರೆ ಅಚಲ ಶ್ರದ್ಧೆಯಿಂದ ನಾನು ಹೇಳಿದ ಕೆಲಸಗಳೆಲ್ಲವನ್ನೂ ಮಾಡು; ಆ ಮನೆಗಳನ್ನು ಕಟ್ಟಿ ಮುಗಿಸು. ಇಲ್ಲವಾದರೆ ಇಂದೇ ಹೊರಡು. ನಿನ್ನನ್ನು ಬಾ ಎಂದವರಾರು?"—ಎಂದ. ಅಲ್ಲಿಂದ ವಿಷಣ್ಣಚಿತ್ತನಾಗಿ ಮಿಲರೇಪ ಗುರುಪತ್ನಿಯ ಬಳಿ ಬಂದು ಆಕೆಗೆ ಶಿರಸಾ ಅಭಿವಾದನೆಮಾಡಿ—"ತಾಯಿ! ನನಗೆ ಉಪದೇಶವಾಗುವ ಸಂಭವ ಇಲ್ಲ; ಇಲ್ಲಿದ್ದಷ್ಟು ದಿನವೂ ಕಾಲವ್ಯಯ, ದೇಹಶ್ರಮ. ಅಲ್ಲದೆ ನನಗೆ ನನ್ನ ತಾಯಿಯನ್ನು ನೋಡುವ ಹಂಬಲ ಅತಿಯಾಗಿದೆ.

ದಯಮಾಡಿ ನನಗೆ ಹೊರಡಲು ಅನುಜ್ಞೆಮಾಡಿ"—ಎಂದು ಬೇಡಿಕೊಂಡ. ಅವನನ್ನು ಪುನಃ ಕಂಡು ಆನಂದದಿಂದ ಪುಲಕಿತಳಾಗಿ ಆಕೆ ಮಿಲರೇಪನಿಗೆ—"ನಿಜ, ಇಲ್ಲಿ ಉಪದೇಶವಾಗುವುದು ಎಂದೋ ಏನೊ! ಆದರೆ ಈ ಗುರುವಿನ ಶಿಷ್ಯನಾದ, ಮಹಾಜ್ಞಾನಿಯಾದ ಸ್ನೋಗ್ಟುನ್ ಎಂಬ ಲಾಮನ ಬಳಿ ಹೋಗುವೆಯಂತೆ, ಸ್ವಲ್ಪ ದಿನ ತಾಳು"—ಎಂದು ಅವನನ್ನು ಉಳಿಸಿಕೊಂಡಳು.

ಅಲ್ಲಿಂದ ಅನತಿಕಾಲದಲ್ಲೇ ಉತ್ಸವದ ದಿನವೊಂದು ಬಂತು; ಅಂದು ಛಾಂಗ್ ಮದ್ಯದ ಸೇವನೆ ಸಾರ್ವಜನೀನ. ಗುರುಪತ್ನಿ ಮೂರು ಬೇರೆ ಬೇರೆ ಪಾತ್ರೆಗಳಲ್ಲಿ ಛಾಂಗ್ ಮಾಡಿದಳು; ಮೊದಲನೆಯದು ಅತಿ ತೀಕ್ಷ್ಣ, ಎರಡನೆಯದು ಸಾಮಾನ್ಯ, ಮೂರನೆಯದು ಅತ್ಯಲ್ಪ. ಊಟದ ಸಮಯದಲ್ಲಿ ತನ್ನ ಗಂಡನಿಗೆ ಮೊದಲನೆಯ ಪಾತ್ರೆಯಿಂದ ಬಡಿಸಿದಳು; ಶಿಷ್ಯರ ಬಲವಂತದಿಂದ ಮೇಲೆ ಮೇಲೆ ಛಾಂಗ್ ಕುಡಿದುದರ ಪರಿಣಾಮವಾಗಿ ಗುರು ಸುಖನಿದ್ರೆಯ ಮಡಿಲಿನಲ್ಲಿ ಮರೆಯಾದ. ಎರಡನೆ ಪಾತ್ರೆಯ ಛಾಂಗ್ ಕುಡಿದ ಇತರ ಶಿಷ್ಯರು ಯಥಾಶಕ್ತಿ ಮೈಮರೆತರು. ಗುರುಪತ್ನಿ ತಾನು ಮಾತ್ರ ಮೂರನೆಯ ಪಾತ್ರೆಯದನ್ನು ಕುಡಿದಳು—ಅದೂ ಸ್ವಲ್ಪಮಾತ್ರ. ಹೀಗೆ ನೆರೆದವರೆಲ್ಲ ವಿವಶರಾಗಿರುವಲ್ಲಿ ಗುರುಪತ್ನಿ ಪೂಜೆಯ ಮನೆಯಿಂದ ಗುರು ಪೂಜಿಸುತ್ತಿದ್ದ ನರೋಪನ ಹಾರ ಜಪಸರಗಳನ್ನು ತೆಗೆದು ಗುರುವಿನ ಲಿಖಿತದಲ್ಲಿ ಸ್ನೋಗ್ಡುನ್ ಲಾಮನಿಗೆ ಪತ್ರವೊಂದನ್ನು ತಯಾರುಮಾಡಿ ಮಿಲರೇಪನಿಗೆ ಅವೆಲ್ಲವನ್ನೂ ಕೊಟ್ಟು—"ಈ ಕ್ಷಣ ನೀನು ಸ್ನೋಗ್ಡುನ್ ಲಾಮನ ಬಳಿ ಹೋಗಿ ಮಾರ್ಪಗುರು ನಿನ್ನನ್ನು ಈ ಸಂಭಾವನೆಯೊಂದಿಗೆ ಕಳುಹಿಸಿದ್ದಾರೆಂದು ಹೇಳು"—ಎಂದು ಹೇಳಿ ಕಳುಹಿಸಿದಳು.

ಅಲ್ಲಿಂದ ಹೊರಟು ಮಿಲರೇಪ ಬಹು ದೂರ ಪ್ರಯಾಣಮಾಡಿ ಮಧ್ಯ ಟಿಬೆಟ್ ಪ್ರದೇಶಕ್ಕೆ ಬಂದ. ಅಲ್ಲಿ ಉಪದೇಶ ಭವನದಲ್ಲಿದ್ದ ಸ್ನೋಗ್ಡುನ್ ಲಾಮನನ್ನು ಸಂಧಿಸಿದ. ತನ್ನ ಪರಮ ಗುರುವಾದ ಸರೋಪ ಪಂಡಿತನ ಹಾರ ಜಪಸರಗಳು ತನ್ನ ಮಠಕ್ಕೆ ಬಂದುದೇ ಪರಮ ಸೌಭಾಗ್ಯವೆಂದು ಆನಂದತುಂದಲಿತನಾಗಿ ಸ್ನೋಗ್ಡುನ್ ಅತಿ ಸಂಭ್ರಮದಿಂದ ಸಕಲ ಮರ್ಯಾದೆಗಳೊಡನೆ ಮಾರ್ಪನ ಸಂಭಾವನೆಗಳನ್ನು ಸ್ವೀಕರಿಸಿದ; ಮಿಲರೇಪ ತಂದಿದ್ದ ಪತ್ರವನ್ನು ಭಕ್ತಿಯಿಂದ ಒಡೆದು ಓದಿದ. ಅದರ ಒಕ್ಕಣೆ ಹೀಗಿತ್ತು—"ನಾನು (ಮಾರ್ಪ) ಇಷ್ಟರಲ್ಲೇ ಸ್ವಲ್ಪಕಾಲ ಅಂತರ್ಮುಖನಾಗುತ್ತೇನೆ; ನನ್ನ ಶಿಷ್ಯ ಮಿಲರೇಪನಿಗಾದರೂ ಉಪದೇಶದ ಅವಸರ ಇದ್ದಂತಿದೆ. ಆದ್ದರಿಂದ ಅವನನ್ನು ನಿನ್ನಲ್ಲಿಗೆ ಉಪದೇಶಕ್ಕಾಗಿ ಕಳುಹಿಸಿದ್ದೇನೆ. ಯಥಾವಿಧಿಯಾಗಿ ಉಪದೇಶಮಾಡು. ಅವನ ದಕ್ಷಿಣೆಗೆಂದು ನನ್ನ ಪೂಜ್ಯ ಗುರು ನರೋಪನ ಹಾರ ಜಪಸರಗಳನ್ನು ಒಪ್ಪಿಸಿಕೋ"—ಎಂದು. 'ಗುರ್ವಾಜ್ಞೆ'ಯೆಂದು ಶಿರಸಾವಹಿಸಿ ಸ್ನೋಗ್ಡುನ್ ಮಿಲರೇಪನಿಗೆ ಸುಮುಹೂರ್ತದಲ್ಲಿ ವಿಧಿವತ್ತಾಗಿ ವಜ್ರಮಂಡಲದ ಮಂತ್ರೋಪದೇಶ ಮಾಡಿದ. ನಂತರ ಮಂತ್ರಸಾಧನೆಗಾಗಿ ಮಿಲರೇಪ ಸ್ನೋಗ್ಡುನ್‌ಲಾಮನ ಮಠದ ಎದುರಿಗೆ ಒಂದು ಗುಹಾಜೋಪಡಿಯನ್ನು ಕಟ್ಟಿಕೊಂಡು ಅಲ್ಲಿ ರುದ್ಧದ್ವಾರನಾಗಿ ಧ್ಯಾನಯೋಗದಲ್ಲಿ ಕುಳಿತ; ಸಣ್ಣದೊಂದು ಕಿಂಡಿಯಿಂದ ಅವನಿಗೆ ಖಾದ್ಯಪಾನೀಯಗಳನ್ನು ಮುಟ್ಟಿಸುತ್ತಿದ್ದರು ವಿನಾ ಅವನಿಗೆ ಬಾಹ್ಯ ಪ್ರಪಂಚದ ಬಾಂಧವ್ಯವೇ ಇರಲಿಲ್ಲ. ಸ್ನೋಗ್ಡುನ್ ಗುರು ಸಮಾಧಿಯ ಕ್ರಮವಿಧಾನಗಳನ್ನೆಲ್ಲ ವಿಶದವಾಗಿ ಹೇಳಿಕೊಟ್ಟಿದ್ದ; ಅದರಂತೆ ಚಾಚೂ ತಪ್ಪದೆ ಅಭ್ಯಾಸಮಾಡಿದರೂ ಮಿಲರೇಪನಿಗೆ ಯಾವ ಸಿದ್ಧಿಯು ಅನು

ಭವವೂ ಆಗಲಿಲ್ಲ. ಮುಂದೆ ಒಂದು ದಿನ ಸ್ನೋಗ್ಗುಡ್ನ್ ಮಿಲರೇಪನ ಸಮಾಧಿಮಂದಿರದ ಬಾಗಿಲಿಗೆ ಬಂದು ಅವನನ್ನು ಕೂಗಿ ಅವನಿಗೆ ಇಂಥಿಂಥ ಸಿದ್ಧಿಗಳು ಆದುವೇ ಎಂದು ಕೇಳಿದ. ಇಲ್ಲವೆಂದು ಮಿಲರೇಪ ಉತ್ತರ ಕೊಟ್ಟಾಗ ಅವನಿಗೆ ಆಶ್ಚರ್ಯವಾಯಿತು—"ಇದೇನಿದು ವಿಚಿತ್ರ! ನಮ್ಮ ಈ ವಿಧಾನದಲ್ಲಿ ಈ ಅಭ್ಯಾಸ ಮಾಡಿದರೆ ಈ ಸಿದ್ಧಿ ಆಗಿಯೇ ಆಗುವುದು ಎಂಬ ಸಹಜನಿಯಮ ಇದೆ; ಈ ಅನುಭವ ಅನೇಕರಿಗಿದೆ. ಆದರೆ ಇವನಿಗೆ ಆ ಅಭ್ಯಾಸ ಮಾಡಿದರೂ ಅದಕ್ಕನುರೂಪವಾದ ಸಿದ್ಧಿ ಆಗದೇಕೆ? ಇವನ ಸಾಧನಾ ಪಥದಲ್ಲಿ ಅಂತರಾಯ ಏನಾದರೂ ಇದ್ದೀತೆ? ನನ್ನ ಗುರು ಮಾರ್ಪನ ಸಮ್ಮತಿ ಇರುವುದು ಸುಳ್ಳಿದ್ದೀತೆ? ಇರಲಿ, ಇನ್ನೂ ಸ್ವಲ್ಪ ಕಾಲ ನೋಡುವ"—ಎಂದುಕೊಂಡು ಮರಳಿದ. ಮಿಲರೇಪನಿಗೆ ಆಗ ತನ್ನ ಆಗಮನ ಸಂದರ್ಭದ ನಿಜ ಸ್ಥಿತಿಯನ್ನು ಹೇಳಿಬಿಡುವ ಮನಸ್ಸಾಯಿತು; ಆದರೆ ಧೈರ್ಯ ಸಾಲದೆ ನಾಲಗೆ ನಿಂತಿತು. ಸಾಧನೆಯಲ್ಲಿ ಗುರುಕೃಪೆ ಎಷ್ಟು ಅಗತ್ಯವೆಂದು ಅವನಿಗೆ ಮನದಟ್ಟಾಯಿತು. ಆದರೂ ತನ್ನ ಶಕ್ತಿ ಇದ್ದಷ್ಟು ಧ್ಯಾನದಲ್ಲಿ ವಿನಿಯೋಗಿಸಿ ಸಾಧನಾಮುಖವಾಗಿ ಕುಳಿತಿದ್ದ.

ಏತನ್ಮಧ್ಯೆ ಮಾರ್ಪ ತನ್ನ ಭವನಗಳನ್ನೆಲ್ಲ ಪೂರೈಸಿ ಅವುಗಳ ಗೃಹ ಪ್ರವೇಶೋತ್ಸವಕ್ಕೆ ಸ್ನೋಗ್ಗುಡ್ನ್‌ನನ್ನೂ ಅವನ ಪರಿವಾರವನ್ನೂ ಆಮಂತ್ರಿಸಿದ. ಆಮಂತ್ರಣ ಪತ್ರದಲ್ಲಿ ವಿಚಾರಮಧ್ಯೆ—"ನನ್ನ ಶಿಷ್ಯ ಮಿಲರೇಪ ನಿನ್ನ ಬಳಿ ಇದ್ದಾನೆಂದು ನನಗೆ ಸುದ್ದಿ ಬಂದಿದೆ. ಅವನು ದುಷ್ಟ, ನೀನು ಬರುವಾಗ ಅವನನ್ನೂ ಕರೆದು ತಾ" ಎಂದಿತ್ತು. ಸ್ನೋಗ್ಗುಡ್ನ್ ಮಿಲರೇಪನ ಗುಹೆಯ ಬಾಗಿಲಿಗೆ ಬಂದು ಮಾರ್ಪನ ಪತ್ರವನ್ನು ಓದಿ ಹೇಳಿ—"ನೋಡಿದರೆ ನಿನ್ನ ಮಂತ್ರೋಪದೇಶಕ್ಕೆ ಗುರುವಿನ ಸಮ್ಮತಿ ಇರುವಂತೆ

ಕಾಣದು ''—ಎಂದಾಗ ಮಿಲರೇಪ—'' ಶ್ರೀಮುಖವನ್ನು ನನಗೆ ಕೊಟ್ಟವರು ಗುರುಪತ್ನಿ '' ಎಂದು ಹೇಳಿದ. ಅದಕ್ಕೆ ಸ್ಗೋಗ್ಟುನ್ —'' ಓ ನಿನ್ನ ಅಸಿದ್ಧಿಗೆ ಇದೇ ಕಾರಣ ; ಗುರು ಕಟಾಕ್ಷ ಇಲ್ಲದೆ ಯಾವ ಸಾಧನೆಯೂ ವ್ಯರ್ಥ. ಅದು ಹೇಗಾದರೂ ಇರಲಿ, ನಿನ್ನನ್ನು ಕರೆದೊಯ್ಯಲು ನನಗೆ ಆದೇಶ ಮಾಡಿದ್ದಾರೆ. ನಿನಗೆ ಬರುವ ಇಚ್ಛೆ ಇದೆಯೆ ? ''—ಎಂದು ಪ್ರಶ್ನಿಸಿದ. ಮಿಲರೇಪ— '' ತಮ್ಮ ಅಂತೇವಾಸಿಯೆಂದು ನನ್ನನ್ನು ಕೊಂಡೊಯ್ಯಿರಿ ''— ಎಂದನು.

ಮುಂದೆ ಸಕಾಲದಲ್ಲಿ ಸ್ಗೋಗ್ಟುನ್ ತನ್ನದೆನ್ನುವ ಎಲ್ಲ ಸಂಪತ್ತನ್ನೂ ಗುರು ಮಾರ್ಪನಿಗೆ ಸಂಭಾವನೆಗಾಗಿ ಒಯ್ದು, ತನ್ನ ಪತ್ನಿ ಪರಿಜನ ಮಿಲರೇಪರೊಂದಿಗೆ ಹೊರಟ. ಈ ಗುರು ದಕ್ಷಿಣೆಯಲ್ಲಿ ಚಿನ್ನ ಬೆಳ್ಳಿ, ಗ್ರಂಥರಾಶಿ, ವಿಗ್ರಹಗಳು, ಹಸು, ಕುರಿ ಎಲ್ಲವೂ ಇದ್ದುವು ; ತನ್ನ ಸ್ವತ್ತಿನಲ್ಲಿ ಒಂದು ಕುಂಟು ಮುದಿ ಆಡನ್ನು ಮಾತ್ರ ಹಿಂದೆ ಬಿಟ್ಟಿದ್ದ. ಮಾರ್ಪನ ಮಠವಿದ್ದ ಡೋವ್ರೋ-ಲುಂಗ್‌ನ ಬಳಿ ಅತಿಥಿಗಳು ಬಂದಾಗ ಮಿಲರೇಪ ತಾನು ಮುಂದೆ ಓಡಿಹೋಗಿ ಗುರುಪತ್ನಿಯನ್ನು ಕಂಡು ಅಭಿವಾದನೆ ಮಾಡಿ ಸ್ಗೋಗ್ಟುನ್ ಗುರು ಸಪರಿವಾರನಾಗಿ ಬರುತ್ತಿರುವ ಸುದ್ದಿ ತಿಳಿಸಿದ. ಆಕೆ ಮಾರ್ಪನಿಗೆ ತಿಳಿಸೆಂದು ಒಳಗೆ ಮಿಲರೇಪನನ್ನು ಕಳಿಸಿದಳು. ಮಿಲರೇಪ ಬಂದಾಗ ಮಾರ್ಪ ಪೂರ್ವಾಭಿಮುಖವಾಗಿ ಕುಳಿತಿದ್ದ ; ಮಿಲರೇಪ ಬಂದು ನಮಸ್ಕರಿಸುತ್ತಲೆ ಮಾರ್ಪ ಉತ್ತರಾಭಿಮುಖವಾಗಿ ತಿರುಗಿದ ; ಮಿಲರೇಪ ಹಾಗೆಯೇ ಬಂದು ನಮಸ್ಕಾರ ಮಾಡಿದ; ಒಡನೆಯೇ ಮಾರ್ಪ ಪಶ್ಚಿಮಾಭಿಮುಖವಾದ ; ಮಿಲರೇಪ ಆ ದಿಕ್ಕಿಗೆ ಬರುತ್ತಲೆ ಮಾರ್ಪ ದಕ್ಷಿಣಾಭಿಮುಖವಾದ. ಆಗ ಮಿಲರೇಪ— '' ಪೂಜ್ಯರೇ, ನನ್ನ ಅಭಿವಾದನೆಯನ್ನು ಸ್ವೀಕರಿಸಲು ನೀವು

ಪ್ಪದಿದ್ದರೂ ಈ ವಾರ್ತೆ ನಿಮಗೆ ಹಿತವೆನಿಸೀತು. ತಮ್ಮ ಪ್ರಮುಖ ಶಿಷ್ಯರಾದ ನ್ಗೋಗ್ದುನ್ ಗುರುಗಳು ಸಪರಿವಾರರಾಗಿ ಂದಿದ್ದಾರೆ; ಅವರ ಯೋಗ್ಯತಾನುಸಾರ ಅವರಿಗೆ ಆದರದ ಸ್ವಾಗತ ನೀಡಬೇಕಷ್ಟೆ?" ಎನ್ನಲು ಕೋಪದಿಂದ ಹಲ್ಲು ಡಿಯುತ್ತ ಮಾರ್ಪ—"ಸ್ವಾಗತವೇ? ನಾನು ಭಾರತದಿಂದ ಷ್ಟೋ ಕಷ್ಟ ಪರಂಪರೆಗಳನ್ನನುಭವಿಸಿ ಬಂದಾಗ ನನಗೆ ಸ್ವಾಗತ ನೀಡಿದವರು ಯಾರು? ಒಂದು ಕುರುಡು ಕಾಗೆಯೂ ರಲಿಲ್ಲ! ನನ್ನಂಥ ಮಹಾಜ್ಞಾನಿ ಬಂದು ಈ ಯಃಕಶ್ಚಿತ್ ಾಮನಿಗೆ ಸ್ವಾಗತ ನೀಡೆನ್ನುವೆಯಾ? ಹಾಗೆ ಅವನು ಬಯಸು ದ್ದರೆ ಬಂದ ದಾರಿ ಹಿಡಿದು ಹಿಂದೆ ಹೋಗಲಿ!"—ಎಂದು ೂಗಾಡಿದ.

ಮಿಲರೇಪ ಅಲ್ಲಿಂದ ಗುರುಪತ್ನಿಯ ಬಳಿ ಮರಳಿ ನಡೆದ ಂಗತಿಯನ್ನು ಹೇಳಲು, ಆಕೆ—"ನ್ಗೋಗ್ದುನ್ ಮಹಾಪಂಡಿತ, ಜ್ಞಾನಿ; ಅಲ್ಲದೆ ಮಠಾಧಿಪತಿ. ಅವನಿಗೆ ಸ್ವಾಗತ ಉಚಿತ ಾದದ್ದು. ನಾನೇ ಬರುತ್ತೇನೆ, ಬಾ"—ಎಂದು ಹೇಳಿ ಾಂಗ್ ಮುಂತಾದ ಉಪಹಾರ ದ್ರವ್ಯಗಳನ್ನು ಪರಿಜನರಿಂದ ರಿಸಿಕೊಂಡು ಹೊರಟಳು. ಅಲ್ಲಿ ಸಾಂಪ್ರದಾಯಿಕವಾಗಿ ದುರುಗೊಂಡು ಅತಿಥಿಗಳನ್ನು ತಮ್ಮ ಮಠಕ್ಕೆ ಕರೆತಂದಳು. ೃಹ ಪ್ರವೇಶದ ಸಂಸ್ಕಾರಗಳೆಲ್ಲ ಯಥಾವಿಧಿಯಾಗಿ ನಡೆದು ಂಜೆ ಸಭಾ ಪೂಜೆಯ ಅವಸರದಲ್ಲಿ ನೆರೆದ ಅತಿಥಿಗಳು ಗುರು ಮಾರ್ಪನಿಗೆ ಸಂಭಾವನೆಗಳನ್ನು ಸಲ್ಲಿಸಿದರು. ನ್ಗೋಗ್ದುನ್ ಂಟು ಮುದಿ ಆಡೊಂದು ವಿನಾ ತನ್ನ ವಿಶಿಷ್ಟ ಸ್ವತ್ತನ್ನೂ ುರುವಿಗೆ ಸಮರ್ಪಿಸಿರುವೆನೆಂದು ಹೇಳಿ ತನಗೆ ವಜ್ರಯಾನದ ೀಕ್ಷೆ ಕೊಡುವ ಕರುಣೆ ಮಾಡಬೇಕೆಂದು ಬೇಡಿಕೊಳ್ಳಲು ಮಾರ್ಪ—"ನಿನಗೆ ದೀಕ್ಷೆ ಬೇಕಿದ್ದರೆ ಆ ಕುಂಟು ಆಡನ್ನೂ

ಇಲ್ಲಿ ತಂದು ಸಮರ್ಪಿಸು"—ಎಂದನು. ನೆರೆದವರೆಲ್ಲ ಬರಿಯ ಹಾಸ್ಯಕ್ಕೆ ಗುರು ಆಡಿದುದೆಂದು ಬಗೆದು ನಕ್ಕರು; ಆದರೆ ಗುರು ಗಂಭೀರವದನನಾಗಿ—"ಅದನ್ನು ತಂದ ವಿನಾ ದೀಕ್ಷೆಯಿಲ್ಲ" —ಎಂದ. ವಿಧಿಯಿಲ್ಲದೆ ನ್ಗೋಗ್ಡುನ್ ತನ್ನ ಮಠಕ್ಕೆ ಮರಳಿ ಆ ಮುದಿ ಆಡನ್ನು ಹೊತ್ತು ತಂದ; ನಂತರ ಮಾರ್ಪ ಪ್ರಸನ್ನ ನಾಗಿ ಅವನಿಗೆ ದೀಕ್ಷಾದಾನ ಮಾಡಿದನು.

ಮಠದಲ್ಲಿ ಒಂದೆರಡು ದಿನದ ಮೇಲೆ ಸಂಜೆಯ ಸಭೆ ನಡೆಯುತ್ತಿದ್ದಾಗ ಇದ್ದಕ್ಕಿದ್ದಂತೆ ಮಾರ್ಪ ನ್ಗೋಗ್ಡುನ್‌ನ ಮೇಲೆ ಕೋಪಗೊಂಡು ತನ್ನ ದೊಣ್ಣೆಯೆತ್ತಿ—"ಎಲಾ, ನನ್ನ ದುಷ್ಟ ಶಿಷ್ಯ ಮಿಲರೇಪನಿಗೆ ನೀನು ಮಂತ್ರೋಪದೇಶ ಮಾಡುವ ಯೇಕ" ಎಂದು ಗರ್ಜಿಸಿದ. ನ್ಗೋಗ್ಡುನ್ ಹೆದರಿ ನಡುಗುತ್ತಾ —"ಸ್ವಾಮಿ ತಮ್ಮ ಪತ್ರದ ಉದ್ದೇಶದಂತೆಯೇ ಮಾಡಿದೆ; ತಾವು ಹಾರ ಜಪಸರಗಳನ್ನೂ ಮಿಲರೇಪನೊಂದಿಗೆ ಕಳಿಸಿದ್ದಿ ರಷ್ಟೆ"—ಎಂದು ತೊದಲಿದ. ಮಾರ್ಪ ದೊಣ್ಣೆಯನ್ನು ಮಿಲ ರೇಪನ ಕಡೆಗೆ ತಿರುಗಿಸಿ—"ಎಲಾ, ಆ ಪದಾರ್ಥಗಳು ನಿನಗೆ ಹೇಗೆ ಸಿಕ್ಕವು?"—ಎಂದು ಕೇಳಿದ. ಮಿಲರೇಪ ಗಡಗಡ ನಡುಗುತ್ತ ಗುರುಪತ್ನಿಯ ಮುಖೇನ ದೊರೆಯಿತೆನ್ನಲು ಗುರು ಎದ್ದು ತನ್ನ ಪತ್ನಿಯನ್ನು ಹೊಡೆಯಲು ಹೊರಟ. ಆಕೆ ಚಟಕ್ಕನೆ ಹಾರಿ ಪಕ್ಕದ ಕೋಣೆಗೆ ಹೋಗಿ ಬಾಗಿಲನ್ನು ಭದ್ರ ಮಾಡಿಕೊಂಡಳು. ಗುರು ಮತ್ತೆ ತನ್ನ ಪೀಠವನ್ನೇರಿ ನ್ಗೋಗ್ಡುನ್ ಕಡೆ ತಿರುಗಿ—"ನೀನು ಈ ಕ್ಷಣ ಹೋಗಿ 'ನನ್ನ ಗುರು ನರೋಪನ ಹಾರ, ಜಪಸರಗಳನ್ನಿಲ್ಲಿ ಕೊಂಡು ಬಾ"— ಎಂದಾದೇಶ ಮಾಡಿದನು.

ನ್ಗೋಗ್ಡುನ್‌ಲಾಮ ಎದ್ದು ಗುರುವಿಗೆ ಅಭಿವಾದನೆ ಮಾಡಿ ಹೊರಟ; ಅಲ್ಲಿ ಆಗಲೇ ಹೊರಗಿದ್ದ ಮಿಲರೇಪ ಅವನ ಕಾಲಿಗೆ

ಬಿದ್ದು—"ನನ್ನಿಂದ ತಮಗೆ ಅಪ್ರೀತಿಯಾಯಿತು ; ನನ್ನ ಮನೋಭೀಷ್ಟ ಸಿದ್ಧಿಸದುದು ಹಾಗಿರಲಿ, ನನ್ನಿಂದ ತಮಗೂ, ಗುರುಪತ್ನಿಗೂ ಆತಂಕ ಅಪಚಾರಗಳಾದುವು. ದಿನಂಪ್ರತಿ ನನ್ನ ಪಾಪದ ರಾಶಿ ವರ್ಧಿಸುತ್ತಿದೆ ; ಈ ಜನ್ಮದಲ್ಲಿ ನನಗೆ ಧರ್ಮಸಿದ್ಧಿಯಾಗದು. ಈಗಲೇ ನನ್ನ ಪ್ರಾಣ ನೀಗಿಕೊಳ್ಳುತ್ತೇನೆ—" ಎನ್ನಲು ನ್ಗೋಗ್ದುನ್ ಅವನನ್ನೆತ್ತಿ ಸಂತೈಸಿ—"ಆತ್ಮಹತ್ಯೆ ಹೇಡಿಯ ಕೃತ್ಯ, ಅಲ್ಲದೆ ಪಾಪಕರ್ಮ. ನಮ್ಮ ಪ್ರತಿಕೂಲಗಳಲ್ಲಿ ನಿನ್ನ ದೋಷ ಏನೂ ಇರದು. ಸ್ವಲ್ಪ ತಾಳು, ಗುರು ಪ್ರಸನ್ನರಾದಾರು. ಇಲ್ಲವಾದರೆ ನಾನೇ ಮಂತ್ರೋಪದೇಶ ಮಾಡುತ್ತೇನೆ. ಧೈರ್ಯಗೆಡುವ ಕಾರಣ ಇಲ್ಲ"—ಎಂದು ಹೇಳಿ ಹೊರಟ.

ಇತ್ತ ಮಾರ್ಪ ಅತಿ ಸಿಟ್ಟಿಗೆದ್ದು ನೆರೆದವರ ಮೇಲೆಲ್ಲ ಹಾರಾಡುತ್ತ ಅಬ್ಬರಿಸುತ್ತಿದ್ದ. ಶಿಷ್ಯರೆಲ್ಲ ಚೆಲ್ಲಾಪಿಲ್ಲಿಯಾಗಿ ಚೆದುರಿ ಅಲ್ಲಲ್ಲಿ ಅಡಗಿಕೊಳ್ಳುತ್ತಿದ್ದರು. ಮಿಲರೇಪ ತನ್ನ ಪಾಪಕೃತ್ಯಗಳನ್ನು ನೆನೆದು ನೆನೆದು ದುಃಖಾಗ್ನಿಯಿಂದ ಬಳಲಿ ಬೆಂಡಾಗಿ ಹೃದಯದಲ್ಲಿ ತತ್ತರಿಸುತ್ತಿದ್ದ.

---

# ತಾರಕಮಂತ್ರಸಿದ್ಧಿ

ತುಸು ಹೊತ್ತಾದ ನಂತರ ಗುರು ಮಾರ್ಪನ ಕೋಪ ಅಡಗಿತು; ಅವನು ಸಮಾಧಾನ ಚಿತ್ತನಾದಾಗ ತನ್ನ ಪತ್ನಿಯನ್ನು ಬರಹೇಳಿದ. ನಂತರ ತನ್ನ ಶಿಷ್ಯ ನ್ಗೋಗ್ಡುನ್‌ನನ್ನು ವಿಚಾರಿಸಿದ. ಬಳಿಯಿದ್ದ ಶಿಷ್ಯರು 'ಗುರುವಿನ ಆದೇಶದ ಪ್ರಕಾರ ತನ್ನ ಮಠದಿಂದ ನರೋಪನ ಮಾಲೆ-ಜಪಸರಗಳನ್ನು ತರಲು ಹೊರಟಿದ್ದ ನ್ಗೋಗ್ಡುನ್ ಬಾಗಿಲ ಬಳಿ ಹತಾಶನಾಗಿ ಅಳುತ್ತಿದ್ದ ಮಿಲರೇಪನನ್ನು ಸಂತೈಸುತ್ತಿದ್ದಾನೆ'ಂದರು; ಅದಕ್ಕೆ ಮಾರ್ಪ, "ಅಯ್ಯೋ ಪಾಪ, ಅವರನ್ನು ಬರಹೇಳು" ಎಂದ. ಶಿಷ್ಯರು ಓಡಿ ಹೋಗಿ, "ಗುರುಗಳು ಈಗ ಶಾಂತಚಿತ್ತರಾಗಿದ್ದಾರೆ; ತಮ್ಮನ್ನು ಕಾಣಬಯಸುತ್ತಾರೆ" ಎಂದಾಗ ನ್ಗೋಗ್ಡುನ್, "ದಯಮಾಡಿ ಗುರುಗಳ ಬಳಿ ಹೋಗಿ—ಮಿಲರೇಪನನ್ನೂ ಕರೆದು ತರಬಹುದೆ?—ಎಂದು ಕೇಳಿ. ಇವನನ್ನು ಇಲ್ಲೇ ಬಿಟ್ಟರೆ ದುಃಖದ ಉದ್ವೇಗದಿಂದ ಆತ್ಮಹತ್ಯೆ ಮಾಡಿಕೊಂಡಾನು" ಎಂದ. ಮಿಲರೇಪ ಗುರು ಶಾಂತಚಿತ್ತನಾದಾಗಲೂ ತನ್ನಲ್ಲಿ ಪ್ರಸನ್ನನಾಗನಲ್ಲಾ ಎಂದು ಗೋಳಿಡಲು ಆರಂಭಿಸಿದ.

ಇತ್ತ ಶಿಷ್ಯರು ಮಾರ್ಪನ ಬಳಿ ಹೋಗಿ ನ್ಗೋಗ್ಡುನ್‌ನ ಅಭ್ಯರ್ಥನೆಯನ್ನು ನಿವೇದಿಸಿದಾಗ, "ಇಂದು ಮಿಲರೇಪ ಅಗ್ರ ಅತಿಥಿ, ಅವನನ್ನು ಡಮೇಮಾ (ಗುರುಪತ್ನಿ) ಹೋಗಿ ಕರೆತರಲಿ" ಎಂದು ಹೇಳಿ, ಆಕೆಯನ್ನು ಕಳಿಸಿದ. ಮಿತಿಮೀರಿದ ಸಂತೋಷದಿಂದ ಆಕೆ ಮಿಲರೇಪನ ಬಳಿ ಓಡಿಬಂದು, "ಏಳು ಮಗು, ಇಂದು ನಿನ್ನ ಕಷ್ಟವೆಲ್ಲ ನಿಂತಿತು. ಗುರು ನಿನ್ನಲ್ಲಿ ಪ್ರಸನ್ನನಾಗಿ

ದ್ದಾನೆ. ನನ್ನೊಡನೆ ಬಾ'' ಎಂದಳು. ಮಿಲರೇಪ ಅನುಮಾನ ದಿಂದಲೇ ಹೋಗಿ ಗುರುವಿನ ಮುಂದೆ ನಿಂತನು. ಗುರು— "ವಿಚಾರವನ್ನು ಆಲೋಚಿಸಿದಲ್ಲಿ ತಪ್ಪು ಯಾರದೂ ಇಲ್ಲ. ನೀನು ಹಿಂದೆ ಮಾಡಿದ ಪಾಪಗಳನ್ನು ನೀಗಿಕೊಳ್ಳಲೆಂದೇ ನಿನಗೆ ಇಷ್ಟು ಬವಣೆ ಪಡಿಸಿದೆ. ಡಮೇಮಾ ಸುಳ್ಳು ಪತ್ರ ಬರೆದು ಕಳಿಸಿದ್ದು ಅವಳ ತಪ್ಪಲ್ಲ; ಶಿಷ್ಯ ಪಡುತ್ತಿರುವ ಕಷ್ಟಗಳನ್ನು ನೋಡಿ ಸಹಿಸಲಾರದ ತಾಯಿಯೊಡಲು ಅವಳದು. ಆ ಪತ್ರ ವನ್ನು ಕೊಂಡು ಹೋದುದು ನಿನ್ನ ತಪ್ಪೂ ಅಲ್ಲ; ಯೇನಕೇನ ಪ್ರಕಾರೇಣ ಸಿದ್ಧಿ ಪಡೆಯುವುದು ಪ್ರಶಂಸನೀಯವಾದ ಆಶಯವೇ. ನಿನಗೆ ನನ್ನ ಅನುಜ್ಞೆಯಿಲ್ಲದೆ ಮಂತ್ರೋಪದೇಶ ಮಾಡಿದುದು ನ್ಗೋಗ್ಡುನ್'ನ ಪ್ರಮಾದವೂ ಅಲ್ಲ; ವಿಚಾರ ಅವನಿಗೆ ತಿಳಿದಿರಲಿಲ್ಲ. ಆದರೆ ಹಾಗೆ ನಿನಗೆ ಚಟಕ್ಕನೆ ಮಂತ್ರೋಪದೇಶವಾದುದರಿಂದ ನಿನಗೆ ಮತ್ತೊಂದು ಮಹತ್ತರವಾದ ನಿರಾಶೆಯನ್ನು ಮಾಡಬೇಕೆಂಬ ನನ್ನ ಅಭೀಷ್ಟ ನಿರರ್ಥಕವಾಯಿತು. ಈಗ ನಿನಗೆ ಎಂಟುಬಾರಿ ನಿರಾಶೆಯಾಗಿದೆ. ವಿವಿಧ ಕಷ್ಟಗಳನ್ನು ಅನುಭವಿಸಿದ್ದೀಯೆ. ಇದರಿಂದ ಎಂಟು ಮಹಾಪಾಪಗಳೂ ವಿವಿಧ ಕ್ಷುದ್ರ ಪಾಪಗಳೂ ಪರಿಹಾರ ವಾದುವು. ಮತ್ತೊಂದು ಬಾರಿ ನಿನಗೆ ನಿರಾಶೆಯ ವೇದನೆ ಆಗಿದ್ದಿದ್ದರೆ ನೀನು ಪರಿಪೂರ್ಣನಾಗಿ ಪಾಪ ಮುಕ್ತನಾಗು ತ್ತಿದ್ದೆ; ನಿನಗೆ ಈ ಜನ್ಮದಲ್ಲೇ ಜೀವನ್ಮುಕ್ತಿ ದೊರೆಯುತ್ತಿತ್ತು. ಡಮೇಮಾನ ಆತುರದಿಂದ ಇದು ಸಾಧ್ಯವಾಗದಾಯಿತು. ಇನ್ನು ನಿನ್ನ ಸಿದ್ಧಿಗಾಗಿ ನಿನಗೆ ಮಂತ್ರೋಪದೇಶ ಮಾಡು ತ್ತೇನೆ''—ಎಂದ.

ಮಿಲರೇಪನಿಗೆ ಇದು ಕನಸೋ ಎಚ್ಚರವೊ ತಿಳಿಯಲಿಲ್ಲ; ಭ್ರಮೆ ಹಿಡಿದವನಂತೆ ದಿಙ್ಮೂಢನಾಗಿ ನಿಂತ. ನೆರೆದವರೆಲ್ಲ ಗುರು

ವಿನ ಅಚಿಂತ್ಯ, ಅವ್ಯಾಜ ಕರುಣೆಯನ್ನು ಕಂಡು ವಿಸ್ಮಿತರಾಗಿ ಆನಂದ ತುಂದಲಿತರಾದರು. ಆ ದಿನ ಮಠದಲ್ಲಿ ದೊಡ್ಡ ಔತಣ ಸಮಾರಂಭವಾಯಿತು. ಅಂದೇ ರಾತ್ರಿ ಮಾರ್ಪ ಮಿಲರೇಪನಿಗೆ ಸಂನ್ಯಾಸ ದೀಕ್ಷೆ ಕೊಟ್ಟು 'ಮಿಲರೇಪ ವಜ್ರಧ್ವಜ' ಎಂಬ ಆಶ್ರಮ ನಾಮಕರಣ ಮಾಡಿದ. ಅಂದು ಮಿಲರೇಪ ಬೌದ್ಧ ಶಾಸನದ ರೀತ್ಯಾ ಶ್ರಾಮಣೇರನೆನಿಸಿಕೊಂಡನು.

ಅನಂತರ ಮಾರ್ಪ ಶಿಷ್ಯನನ್ನು ಏಕಾಂತಕ್ಕೊಯ್ದು ಅಲ್ಲಿ ಬಲಿ ವೇದಿಕೆಯನ್ನು ನಿರ್ಮಿಸಿ, ಅರವತ್ತೆರಡು ಕುಲದೇವತೆಗಳನ್ನು ಆವಾಹಿಸಿ ವಜ್ರ ಮಂಡಲವನ್ನು ಬರೆದು ಅದರ ಅರ್ಥವನ್ನು ವಿವರಿಸಿದನು. ಅನಂತರ ಮಂತ್ರಯಾನದ ವಿವಿಧ ತತ್ತ್ವಗಳನ್ನೂ ಯೋಗ ವಿಧಿಗಳನ್ನೂ ಅವನಿಗೆ ತಿಳಿಯ ಹೇಳಿ, "ಮಗು, ನೀನು ನನ್ನ ಸಚ್ಛಿಷ್ಯರಲ್ಲಿ ಅಗ್ರಗಣ್ಯನು; ಈ ವಿಚಾರ ನೀನು ಇಲ್ಲಿ ಬಂದ ದಿನವೇ ನನಗೆ ಮನದಟ್ಟಾಯಿತು. ನಿನ್ನ ಬರುವಿಕೆಯನ್ನು ಸೂಚಿಸಿ ನನಗೂ ಗುರುಪತ್ನಿಗೂ ಕನಸಾಯಿತು. ನಿನ್ನನ್ನು ಇದಿರುಗೊಳ್ಳಲೆಂದೇ ನಾನು ಸ್ವತಃ ಹೊಲಕ್ಕೆ ಬಂದು ಉಳುತ್ತಿದ್ದುದು. ನಿನಗೆ ಕಟ್ಟಲು ಹೇಳಿದ ನಾಲ್ಕು ಮನೆಗಳು ನಾಲ್ಕು ಮಹಾ ಕರ್ಮಗಳನ್ನು ಸೂಚಿಸುತ್ತವೆ—ಶಾಂತ, ದೃಢ, ಸುಂದರ, ನಿಷ್ಠ ಕರ್ಮಗಳೇ ಈ ನಾಲ್ಕು. ನಿನ್ನ ಹೃದಯದಲ್ಲಿ ಪಶ್ಚಾತ್ತಾಪ ಉದ್ವೇಗಗಳನ್ನುಂಟುಮಾಡುವುದೇ ನನ್ನ ಉದ್ದೇಶವಾಗಿತ್ತು. ಆದರೆ ನೀನು ಎಲ್ಲ ಬವಣೆಗಳನ್ನೂ ಧೈರ್ಯದಿಂದ ಅನುಭವಿಸಿ, ಶ್ರದ್ಧೆಯಲ್ಲಿ ಎಳ್ಳಷ್ಟೂ ಕುಂದದೆ ನಿಶ್ಚಲನಾಗಿದ್ದೆಯಾದ ಕಾರಣ ಈ ತಾರಕ ಮಂತ್ರಕ್ಕೆ ಅಧಿಕಾರಿಯಾದೆ ; ಶ್ರದ್ಧೆಯಲ್ಲಿ, ವೀರ್ಯದಲ್ಲಿ, ಧೃತಿಯಲ್ಲಿ, ಮತಿಯಲ್ಲಿ ನೀನು ನನ್ನ ಶಿಷ್ಯರಲ್ಲಿ ಸರ್ವಶ್ರೇಷ್ಠ. ಇಷ್ಟರಲ್ಲೇ ಸಂಸಾರ ಬಂಧಗಳಿಂದ ಮುಕ್ತನಾಗಿ, ಭವದ ಹಂಗು ತೊರೆದು ಸಂಪೂರ್ಣ ಲಾಮನಾಗುವೆ" ಎಂದನು.

ಅನಂತರ ಗುರುವಿನ ಆದೇಶದ ಪ್ರಕಾರ ಮಿಲರೇಪ ಆ ಮಠ ದಲ್ಲೇ ತುಸು ದಿನಗಳನ್ನು ಕಳೆದನು; ಅವನಿಗೆ ನಿರಂತರವೂ ಆದರದ ಆತಿಥ್ಯವಾಗುತ್ತಿತ್ತು. ಆಮೇಲೆ ಸಮೀಪದಲ್ಲೇ ಇದ್ದ ಲ್ಹೊ-ಬ್ರಾಕ್-ಟಕ್-ನ್ಯ ಎಂಬ ಗುಹೆಯ ಒಳಗೆ ಧ್ಯಾನಕ್ಕೆಂದು ಸೇರಿದ; ಅಲ್ಲಿ ಒಂದು ಬಟ್ಟೆ ಹಾಸಿ ತಲೆಯಮೇಲೆ ಹಚ್ಚಿದ ಬತ್ತಿಯ ದೀಪವೊಂದನ್ನಿಟ್ಟುಕೊಂಡು, ಪದ್ಮಾಸನದಲ್ಲಿ ಅಚಲ ನಾಗಿ ಕುಳಿತು ಧ್ಯಾನಕ್ಕೆ ಮೊದಲಿಟ್ಟನು. ಹೀಗೆ ದಿನ-ರಾತ್ರಿಗಳು ಕಳೆದು ಹನ್ನೊಂದು ತಿಂಗಳುಗಳು ಸರಿದವು. ಆಗ ಗುರು ಪತ್ನಿ ಯೊಂದಿಗೆ ಬಂದು "ಭಲೆ, ಕುಳಿತ ಬಟ್ಟೆಯ ಕಾವು ಆರದೆ ಹನ್ನೊಂದು ತಿಂಗಳು ಒಂದೇ ಸಮನೆ ಧ್ಯಾನ ಮಾಡಿರುವೆ. ಸ್ವಲ್ಪ ವಿಶ್ರಾಂತಿಗಾಗಿ ಹೊರಗೆ ಬಾ, ನಿನ್ನ ಅನುಭವಗಳನ್ನು ಕೇಳುವ" ಎಂದನು. ಧ್ಯಾನದಿಂದೆದ್ದು ಬರಲು ಮನಸ್ಸಿಲ್ಲದಿದ್ದರೂ ಗುರ್ವಾಜ್ಞೆಯನ್ನು ಮೀರಲಾರದೆ ಮಿಲರೇಪ ಎದ್ದು ಗುಹೆಯ ಹೊರಗೆ ಬಂದನು; ಗುರುಪತ್ನಿ ಒಡನೆಯೇ ಅವನನ್ನು ವಾತ್ಸಲ್ಯ ದಿಂದ ಆಲಿಂಗಿಸಿಕೊಂಡು ಮೈದಡವಿ ಆನಂದ ಬಾಷ್ಪವನ್ನು ಸುರಿಸಿದಳು. ಸಮಾಗಮದ ಸಂಭ್ರಮ ತುಸು ಇಳಿದಾಗ ಗುರು, "ನಾವಿಬ್ಬರೂ ಅಧ್ಯಾತ್ಮ ವಿಚಾರ ಮಾಡುತ್ತಿರುವಲ್ಲಿ ಏನಾ ದರೂ ಉಪಾಹಾರವನ್ನು ಸಿದ್ಧಮಾಡು" ಎಂದು ಹೆಂಡತಿಗೆ ಹೇಳಿ ಮಿಲರೇಪನನ್ನು ಕುರಿತು—"ಮಗು, ಧ್ಯಾನದ ವೇಳೆಯಲ್ಲಿ ನಿನಗಾದ ಅನುಭವಗಳ, ನಿನಗೆ ದೊರೆತ ದೃಷ್ಟಿಗಳ ವಿಚಾರ ಕೇಳುವ ಕುತೂಹಲವಾಗಿದೆ"—ಎಂದನು.

ಮಿಲರೇಪ ಮಂಡಿಯೂರಿ ಗುರುವಿನ ಪಾದಗಳನ್ನು ಸ್ಪರ್ಶ ಮಾಡಿ ನಮಸ್ಕರಿಸಿ ಅಂಜಲಿಬದ್ಧನಾಗಿ ಗುರುವಿಗೆ ಅಭಿನಂದನಾ ರೂಪವಾದ ಏಳು ಶ್ಲೋಕಗಳನ್ನು ಆಶು ಕವಿತ್ವಮಾಡಿ ಹಾಡಿ—"ಪೂಜ್ಯಪಾದರಾದ ತಾವು ಪ್ರಜ್ಞಾಸಾಗರರು; ಸರ್ವ

ಜ್ಞರು. ನಾನಾದರೋ ಅಲ್ಪಮತಿ, ಜ್ಞಾನದಲ್ಲಿ ಕನಿಷ್ಠ. ಆದರೂ ತಮ್ಮ ಅನುಜ್ಞೆಗೆ ಕಟ್ಟುಬಿದ್ದು ನನ್ನ ಸಾಧನೆಯ ಪರಿಚಯ ಮಾಡಿಕೊಡುವ ಸಾಹಸ ಮಾಡುತ್ತೇನೆ. ದಯೆಯಿಂದ ಲಾಲಿಸಿ. ಮೊದಲಿಗೆ, ಈ ನನ್ನ ದೇಹ ಅಜ್ಞಾನದ ಒಡಲಿಂದ ಎದ್ದದ್ದೆಂದೂ ದ್ವಾದಶ ನಿದಾನಗಳಿಂದಾದುದೆಂದೂ, ರಕ್ತ ಮಾಂಸಾದಿ ವಸ್ತು ಗಳಿಂದ ವಿರಚಿತವಾಗಿ ಚೈತನ್ಯವೆಂಬ ದೀಪದಿಂದ ಬೆಳಗುತ್ತಿರು ವುದೆಂದೂ ಅರಿತುಕೊಂಡೆ. ಮೋಕ್ಷಕ್ಕೆ ಹಂಬಲಿಸುವ ಜನ ಈ ದೇಹದಿಂದ ಮುಕ್ತಿಯನ್ನು ಸಾಧಿಸಿಕೊಳ್ಳುವುದು ಸಾಧ್ಯ ; ಪ್ರಾಪಂಚಿಕ ಸುಖಕ್ಕೆ ಬಾಯಿ ಬಿಡುವ ಜನ ಪಾಪ ಕೂಪಗಳಿಗೆ ಇಳಿಯುವುದು ಸಾಧ್ಯ. ಅಂದರೆ, ಮೇಲೆ ಏರಲು ಅಥವಾ ಕೆಳಗೆ ಇಳಿಯಲು ಈ ದೇಹ ಸಂಧಿ ಸ್ಥಾನದಲ್ಲಿದೆ. ನಮ್ಮ ಗುರಿ ಏನೆಂಬುದನ್ನು ನಿರ್ಧರಿಸಿಕೊಳ್ಳಲು ಇರುವ ಕ್ಷಣವೇ ಶುಭ ಸಂದರ್ಭ. ಇದೇ ಮಾನವ ಜೀವನದ ಧ್ಯೇಯವೆಂದು ಅರಿತು ಕೊಂಡೆ. ಮುಕ್ತಿಮಾರ್ಗಕ್ಕೆ ಬುದ್ಧ ಧರ್ಮ ಸಂಘಗಳೆಂಬ ತ್ರಿರತ್ನಗಳಲ್ಲಿ ಶರಣು ಹೋಗುವುದು ಸಹಾಯಕಾರಿ ; ಗುರುವಿನ ಅನುಗ್ರಹ ಆವಶ್ಯಕ. ಅಷ್ಟಾಂಗಿಕ ಮಾರ್ಗದಲ್ಲಿ ನಡೆಯುವುದ ರಿಂದ ಸಂಸಾರದ ಬಂಧ ಹಿಂಗುತ್ತದೆ. ನಿಷ್ಠೆಯಿಂದ ವ್ರತಗಳನ್ನು ನಡಸುತ್ತ ಮಾರ್ಗದ ಉತ್ತರೋತ್ತರ ಘಟ್ಟಗಳನ್ನು ಮುಟ್ಟ ಬೇಕು. ತನ್ನ ವೈಯಕ್ತಿಕ ಶಾಂತಿಗೆ ಮಾರುಹೋದ ಸಾಧಕ ಹೀನಯಾನದಲ್ಲಿ ನಡೆಯುತ್ತಾನೆ ; ನಿಖಿಲ ಜೀವಜಂತುಗಳಮೇಲೆ ಕರುಣ ತೋರಿ ತನ್ನ ಪುಣ್ಯ ರಾಶಿಯನ್ನು ಅವರಿಗೆಲ್ಲ ಪರಿವರ್ತಿಸು ವವನು ಮಹಾಯಾನವನ್ನು ಹಿಡಿಯುತ್ತಾನೆ. ಹೀನಯಾನದಿಂದ ಮಹಾಯಾನವನ್ನು ಏರಲು ವಜ್ರಯಾನದಲ್ಲಿ ನಿಷ್ಠೆ ಆವಶ್ಯಕ. ಇದರಲ್ಲಿ ದೀಕ್ಷಾಧಾರಣೆಮಾಡಲು ಗುರುವಿನ ಸಹಕಾರ ಅನಿವಾರ್ಯ. ದೀಕ್ಷೆ ಪಡೆದು ಸ್ಮೃತಿವಂತನಾಗಿ ಧೃತಿಯಿಂದ

ಸಾಧನಾಪಥದಲ್ಲಿ ಮುಂದೆ ಮುಂದೆ ಸಾಗಲು ನೈರಾತ್ಮ್ಯದ ಅರಿವಾಯಿತು; ಇದಾದೊಡನೆ ಬುದ್ಧಿಯ ಉದ್ವೇಗಗಳೆಲ್ಲ ಆರಿ, ಚಿತ್ತ ವೃತ್ತಿಗಳೆಲ್ಲ ಸ್ತಬ್ಧವಾಗಿ ಶಾಂತಿ ಉಪಲಬ್ಧವಾಯಿತು. ಈ ಶಾಂತ ಸ್ಥಿತಿಯಲ್ಲಿ ಅದರ ಅರಿವೇ ಇಲ್ಲದೆ ದಿಸಗಳು, ತಿಂಗಳು ಗಳು ಉರುಳಿದವು. ಇದರಲ್ಲಿ ಸ್ಮೃತಿ ತಪ್ಪಲಿಲ್ಲ, ಪ್ರಜ್ಞೆ ಹಾರಲಿಲ್ಲ: ಪ್ರಜ್ಞೆ ಶಾಂತವಾಗಿ, ಸ್ಮೃತಿ ಸ್ತಿಮಿತವಾಗಿ ಆನಂದದ ಅನುಭವ ವಾಯಿತು. ಇದನ್ನು ಪ್ರಜ್ಞಾತೀತಸ್ಥಿತಿ ಎನ್ನಬಹುದು. ಆದರೆ ಅದನ್ನು ಅನುಭವಿಸುವವರೆಗೆ ಅದು ಅರ್ಥವಾಗದು. ಇದನ್ನು ನಾನು ಅನುಭವಿಸಲು ತಮ್ಮ ಕರುಣೆಯೇ ಕಾರಣ; ತಮ್ಮ ಈ ಋಣವನ್ನು ತೀರಿಸುವುದು ನನ್ನಿಂದಾಗದು; ಯಾವಜ್ಜೀವವೂ ಯೋಗಾವಚಾರನಾಗಿ ನಿಂತು ತಮ್ಮ ಉಪದೇಶವನ್ನು ಮನನ ಮಾಡುತ್ತಿರುತ್ತೇನೆ" ಎಂದು ಮುಗಿಸಿದ. ಗುರುವಿಗೆ ತುಂಬ ಸಂತೋಷವಾಯಿತು; ಅವನ ಪ್ರಜ್ಞೆ, ಸಂಕಲ್ಪಗಳನ್ನು ಹೊಗಳಿ ಅಂಥ ಶಿಷ್ಯನನ್ನು ಪಡೆದ ತಾನೇ ಧನ್ಯನೆಂದುಕೊಂಡ. ಗುರುಪತ್ನಿ ತಂದ ಉಪಹಾರಗಳನ್ನು ಎಲ್ಲರೂ ಉಂಡಮೇಲೆ ಪರಸ್ಪರ ಬೀಳ್ಕೊಟ್ಟು ಮಿಲರೇಪ ಧ್ಯಾನಕ್ಕೆಂದು ಮತ್ತೆ ತನ್ನ ಗುಹಾವಾಸ ಸೇರಿದ.

ಮಿಲರೇಪ ಹೀಗೆ ಧ್ಯಾನದಲ್ಲಿ ನಿಮಗ್ನನಾಗಿರುವಾಗ ಒಂದು ರಾತ್ರಿ ಅವನಿಗೆ ಈ ಕನಸಾಯಿತು: ನೀಲಿಬಣ್ಣದ ಸುಂದರ ಸ್ತ್ರೀ ಯೊಬ್ಬಳು ಬಂದು—"ಮಗು, ದೀರ್ಘವಾದ ಧ್ಯಾನದಿಂದಾಗಿ ಮಹಾಮುದ್ರೆಗಳನ್ನು ವಶಪಡಿಸಿಕೊಂಡಿರುವೆ; ಷಡ್ದರ್ಶನ ಗಳನ್ನು ಅರಿತಿರುವೆ. ಆದರೆ ನಿನಗೆ ವಜ್ರಪ್ರಸ್ಥಾನದ ಉಪದೇಶ ವಿಲ್ಲದುದರಿಂದ ಬುದ್ಧತ್ವ ದೊರೆಯದು"—ಎಂದಂತಾಯಿತು. ಎದ್ದವನೇ ಮಿಲರೇಪ ಕನಸಿನ ವಿಚಾರ ಆಲೋಚಿಸಿದಾಗ, ಬಂದ ಹೆಂಗಸು ತನ್ನ ಕುಲದೇವತೆಯಾದ ಡಾಕಿನಿಯೋ ಅಥವಾ

ಧ್ಯಾನಭಂಗಕ್ಕೆಂದು ಬಂದ ಮಾರನ ಮಗಳೋ ತಿಳಿಯಲಿಲ್ಲ. ಒಡನೆಯೇ ಮಿಲರೇಪ ಗುಹಾವಾಸ ಬಿಟ್ಟು ಗುರುವಿನ ಬಳಿ ಓಡಿದ; ಹೀಗೆ ತಪೋಮಧ್ಯದಲ್ಲಿ ಓಡಿಬಂದ ಶಿಷ್ಯನನ್ನು ಕಂಡು ಮಾರ್ಪ ಬೆಚ್ಚಿದ. ಶಿಷ್ಯ ತನ್ನ ಸ್ವಪ್ನ ವೃತ್ತಾಂತವನ್ನು ಹೇಳಲು ಗುರು ತುಸು ಹೊತ್ತು ಚಿಂತಾಮಗ್ನನಾಗಿದ್ದು, "ಹೌದು, ಅದು ಡಾಕಿನಿಯೇ. ನಾನು ಮೊನ್ನೆ ಭಾರತ ದೇಶಕ್ಕೆ ಹೋಗಿ ದ್ದಾಗ ನನ್ನ ಗುರು ನರೋಪ ಪಂಡಿತರೂ ಈ ವಜ್ರ ಪ್ರಸ್ಥಾ ನದ ವಿಚಾರ ಹೇಳಿದಂತೆ ನನ್ನ ನೆನಪು. ಆದರೆ ಈ ಗ್ರಂಥ ನನ್ನ ಬಳಿಯಲ್ಲಿದೆಯೇ ಎಂದು ಸಂದೇಹ" ಎಂದನು. ಆ ದಿನವೆಲ್ಲ ಗುರುಶಿಷ್ಯರಿಬ್ಬರೂ ಮಠದ ಗ್ರಂಥಾಲಯವನ್ನೆಲ್ಲ ಪರಿಶೋಧಿಸಿ ದರು ; ಆ ಗ್ರಂಥಕ್ಕೆ ಸಂಬಂಧಿಸಿದ ಇತರ ಗ್ರಂಥಗಳು ದೊರೆತವು, ಆದರೆ ಆ ಗ್ರಂಥದ ಒಂದು ಹಾಳೆಯೂ ದೊರೆಯಲಿಲ್ಲ.

ಆದರೂ ಕೆಚ್ಚೆದೆಯ ಮಾರ್ಪ ತನ್ನ ವಯಸ್ಸಿನ ದೌರ್ಬಲ್ಯ ವನ್ನೂ ಎಣಿಸದೆ, ಮಾರ್ಗಮಧ್ಯದ ಕಷ್ಟಗಳನ್ನೂ ಗಣನೆಗೆ ತಾರದೆ ಒಡನೆಯೇ ಭಾರತಕ್ಕೆ ಹೋಗಿ ತನ್ನ ಗುರುವನ್ನು ಕಂಡು ಈ ಗ್ರಂಥದ ಉಪದೇಶವನ್ನು ಪಡೆಯಲು ನಿಶ್ಚಯಿಸಿದ ; ಯಾರ ಆಗ್ರಹ ಅಭ್ಯರ್ಥನೆ ಅನುರೋಧಗಳನ್ನೂ ಗಮನಿಸದೆ ಹೊರಟೇ ಬಿಟ್ಟನು. ಭಾರತವನ್ನು ಮುಟ್ಟಿದಾಗ ಅವನ ಗುರು ನರೋಪ ಒಂದು ದಟ್ಟವಾದ ಕಾಡಿನ ನಡುವೆ ತನ್ನ ದೇಹ ತ್ಯಾಗಕ್ಕಾಗಿ ಹವಣಿಸುತ್ತಿದ್ದನು ; ಮಾರ್ಪ ಅವನ ಬಳಿ ಬಂದು ವಜ್ರ ಪ್ರಸ್ಥಾ ನದ ವಿಚಾರ ಪ್ರಸ್ತಾಪಿಸಿದಾಗ ಅವನಿಗೆ ಆಶ್ಚರ್ಯವಾಯಿತು. ಮಾರ್ಪನನ್ನು ಕುರಿತು—"ಈ ಗ್ರಂಥ ನಿನಗೇ ನೆನಪಿಗೆ ಬಂತೋ, ಅಥವಾ ಕನಸಿನಲ್ಲಿ ಯಾರಾದರೂ ಹೇಳಿದರೋ ?"—ಎಂದು ಪ್ರಶ್ನಿಸಲಾಗಿ ಮಿಲರೇಪನಿಗೆ ನಡೆದ ಸಂಗತಿಯನ್ನು ವಿವರಿಸಿದ. ಮಿಲರೇಪನ ವಿಚಾರ ಕೇಳಿ ನರೋಪ, "ಪರಮಶುಭ! ಟಿಬೆಟ್

ನಲ್ಲಿ ಈಗಲೂ ಇಂಥ ಸೂರ್ಯಸಮರಾದ ಸಿದ್ಧರು ಇದ್ದಾರಲ್ಲ!" ಎಂದು ಹೇಳಿ ಟಿಬೆಟ್‌ದೇಶ ಇರುವ ದಿಕ್ಕಿಗೆ ತಿರುಗಿ ಮಿಲರೇಪನಿಗೆ ಮೂರುಬಾರಿ ಅಭಿವಾದನೆ ಮಾಡಿದ. ಅನಂತರ 'ಡಾಕಿನೀಕರ್ಣ ತಂತ್ರ'ವನ್ನು ಉಪೋದ್ಘಾತರೂಪವಾಗಿ ಉಪದೇಶಮಾಡಿದನಂತರ 'ವಜ್ರಪ್ರಸ್ಥಾನ'ವನ್ನು ಮಾರ್ಪನಿಗೆ ವಿವರಿಸಿದನು.

ಮಾರ್ಪ ಕೃತಾರ್ಥನಾಗಿ ಸ್ವಗ್ರಾಮಕ್ಕೆ ಮರಳಿದ ಹೊಸತರಲ್ಲೇ ಅವನ ಮಗ ಆಕಸ್ಮಿಕವಾಗಿ ತೀರಿಕೊಂಡನು; ಜ್ಞಾನದಲ್ಲಿ, ನಿಷ್ಠೆಯಲ್ಲಿ, ತಂದೆಗೆ ಅನುರೂಪನಾದ ಮಗನಾಗಿದ್ದು ಮಠದ ಪೀಠಕ್ಕೆ ಉತ್ತರಾಧಿಕಾರಿಯಾಗಿದ್ದ ಇವನು ವಿಧಿವಶನಾದಾಗ ಮಾರ್ಪನಿಗೆ ತನ್ನ ಅವಸಾನವೂ ಸನ್ನಿಹಿತವಾಗಿದೆಯೆಂಬ ಸಂಶಯ ಬಂದಿತು. ತನ್ನ ಶಿಷ್ಯರನ್ನೆಲ್ಲ ಕರೆದು ಅವರವರ ಅಭಿರುಚಿಗೆ ಉಚಿತವಾದ ಉಪದೇಶಗಳನ್ನು ಮಾಡಿ, ತನ್ನ ಗ್ರಂಥ ಭಂಡಾರವನ್ನೆಲ್ಲ ಅವರಲ್ಲಿ ಹಂಚಿ, ಧರ್ಮ ಪ್ರಚಾರಕ್ಕೆ ಶ್ರಮಿಸಿರೆಂದು ಅವರವರ ಸ್ವಸ್ಥಾನಗಳಿಗೆ ಕಳುಹಿಸಿ, ಮಿಲರೇಪನನ್ನು ಮಾತ್ರ ತನ್ನ ಬಳಿಯೇ ಉಳಿಸಿಕೊಂಡನು.

ಮಿಲರೇಪ ತನ್ನ ಗುಹಾವಾಸದಲ್ಲಿ ಎಂದಿನಂತೆ ಧ್ಯಾನಮಗ್ನನಾಗಿರುವಲ್ಲಿ ಒಂದು ರಾತ್ರಿ ಬಳಲಿ ನಿದ್ರೆಹೋದನು; ನಿದ್ರೆಯಲ್ಲಿ ಒಂದು ಕನಸು. ಕನಸಿನಲ್ಲಿ ತನ್ನ ಗ್ರಾಮದ ತನ್ನ ಮನೆ ಮುರಿದು ಬಿದ್ದು ಮುದಿಕತ್ತೆಯ ಕಿವಿಗಳಂತೆ ಕಾಣುತ್ತಿತ್ತು; ತಾನು ಶೇಖರಿಸಿದ್ದ ಧರ್ಮ ಗ್ರಂಥಗಳೆಲ್ಲ ಗಾಳಿಮಳೆಗಳ ಆವೇಶಕ್ಕೆ ಬಲಿಯಾಗಿದ್ದುವು. ಫಲವತ್ತಾದ ತನ್ನ ಹೊಲ ಮೊಂಡು ಮೊಂಡಾಗಿ ಬೆಳೆದು ಅಗಮ್ಯವಾಗಿತ್ತು; ತನ್ನ ತಾಯಿ ಸತ್ತು ಬಿದ್ದಿದ್ದಳು; ತನ್ನ ಒಬ್ಬಳೇ ತಂಗಿ ದಿಕ್ಕುಕಾಣದೆ ಊರೂರು ಅಲೆಯುತ್ತಿದ್ದಳು. ಮಿಲರೇಪ ನಿದ್ರೆಯಿಂದ ಬೆಚ್ಚಿ ಎದ್ದನು; ತನ್ನ

ತಾಯಿ ತಂಗಿಯರನ್ನು ಕಾಣುವ ಕುತೂಹಲ ಪ್ರಬಲಿಸಿತು. ಅವನು ಮನೆಯಿಂದ ಬಂದು ಹತ್ತಾರು ವರ್ಷಗಳಾಗಿದ್ದುವು ; ಅದೂ ತಾಯಿ ದುಃಸ್ಥಿತಿಯಲ್ಲಿದ್ದಾಗ. ಈಗ ಅವನಿಗೆ ತಾಯ ಹಂಬಲ ಅತಿಯಾಗಿ ಒಡನೆಯೇ ಗುಹೆಯಿಂದ ಹೊರ ಹಾರಿ ತನ್ನ ಗುರುವಿನ ಬಳಿ ಬಂದ. ಗುರು ನಿದ್ರೆಯಲ್ಲಿದ್ದ ; ಅವನು ಏಳುವವರೆಗೂ ಅವನ ಕಾಲಬಳಿ ಕುಳಿತಿದ್ದು ಎದ್ದ ಒಡನೆಯೇ ತನ್ನ ಸ್ವಪ್ನ ವೃತ್ತಾಂತವನ್ನು ತಿಳಿಸಿ ತನ್ನ ಗ್ರಾಮಕ್ಕೆ ಹೋಗಿ ಬರಲು ಅವನ ಅನುಜ್ಞೆಯನ್ನು ಬೇಡಿದ. ಗುರು—"ಮಗು, ನೀನು ಇಲ್ಲಿಗೆ ಬಂದಾಗ ನಿನ್ನ ಮನೆಯ, ನಿನ್ನ ಜನರ ಬಂಧನ ವನ್ನು ಮರೆತಿರುವೆನೆಂದು ಹೇಳಿದೆಯಲ್ಲವೆ ? ಈಗ ಮರಳಲೆಣಿಸು ತ್ತೀಯೆ. ಸಂನ್ಯಾಸಿಗೆ ಇದು ಸಲ್ಲದು. ಒಂದು ವೇಳೆ ನೀನು ಮನೆಗೆ ಹಿಂದಿರುಗಿದರೂ ನಿನ್ನ ತಾಯಿ ಜೀವಂತಳಾಗಿರುವ ಸಂಭವ ಇಲ್ಲ. ಆದರೂ ಹಲವಾರು ವರ್ಷ ಮನೆ ಬಿಟ್ಟು ಅಲೆದಿ ದ್ದೀಯೆ ; ಮನೆಗೆ ಹೋಗಿ ಬಾ. ಆದರೆ ನೀನು ಬಂದಾಗ ನಾನು ಮಲಗಿದ್ದುದು—ನೀನು ಮರಳಿ ಇಲ್ಲಿಗೆ ಬಂದಾಗ ನಾನು ಬದುಕಿರುವುದಿಲ್ಲವೆಂದು ಸೂಚಿಸುತ್ತದೆ—" ಎಂದು ಹೇಳಿ ತನ್ನ ಪತ್ನಿಯನ್ನು ಕರೆದು ಪೂಜಾಗೃಹದಲ್ಲಿ ಸಿದ್ಧತೆ ಮಾಡುವಂತೆ ತಿಳಿಸಿದನು.

ಅನಂತರ ಗುರು ತಾನೇ ಸ್ವಹಸ್ತದಿಂದ ಮಂಡಲವನ್ನು ರಚಿಸಿ ಅದರಲ್ಲಿ ಮಿಲರೇಪನನ್ನು ಕೂರಿಸಿ ಅತ್ಯಂತ ಗಹನವಾದ ತಾರಕ ಮಂತ್ರಗಳನ್ನು ಉಪದೇಶಿಸಿ, "ಮಗೂ, ನಿನಗೊಬ್ಬನಿಗೆ ಮಾತ್ರ ನನ್ನ ಅಶೇಷವಾದ ವಿದ್ಯೆಯನ್ನು ದಾನ ಮಾಡಿದ್ದೇನೆ ; ಏಕೆಂದರೆ ಅದು ನನ್ನ ಗುರು ನರೋಪ ನನಗಿತ್ತ ಶಾಸನ. ಈ ವಿದ್ಯೆಯನ್ನು ನಿನಗೆ ಯುಕ್ತನೆಂದು ಕಂಡ ಶಿಷ್ಯನಿಗೆ ದಾನ ಮಾಡು. ಯೋಗ್ಯ ಶಿಷ್ಯನಿಗೆ ದಾನ ಮಾಡೆಂದು ಅವನಿಗೆ

ಹೇಳು. ಹೀಗೆ ವಿದ್ಯೆ ಹದಿಮೂರು ತಲೆಮೊರೆಗಳು ಸಾಗಲಿ. ಯಾವ ಪ್ರಾಪಂಚಿಕ ಪ್ರಯೋಜನಕ್ಕಾಗಲಿ ಈ ಮೋಕ್ಷ ವಿದ್ಯೆಯನ್ನು ಮಾರದಿರು: ಅದರಿಂದ ಅನರ್ಥ ಸಂಭವಿಸೀತು! ತಿಲೋಪ ನರೋಪನಿಗೆ, ನರೋಪ ನನಗೆ, ನಾನು ನಿನಗೆ ವಿದ್ಯಾದಾನ ಮಾಡುವ ಮುನ್ನ ಅನುಸರಿಸಿದ ವಿಧಿ ಕಟುವಾದದ್ದು; ಅದು ಸಾಮಾನ್ಯ ಮನುಷ್ಯರಿಗೆ ರುಚಿಸದು. ಆದುದರಿಂದ ಅದನ್ನು ನೋಡಿ ಅನುಸರಿಸಬೇಕು. ಭಾರತ ದೇಶದ ಜ್ಞಾನ ರಾಶಿಯಲ್ಲಿ ಸ್ವಲ್ಪಮಾತ್ರ ನಾನು ಸಂಪಾದಿಸಿ ನಿನಗೆ ಬೋಧಿಸಿದ್ದೇನೆ; ಉಳಿದುದನ್ನು ನೀನು ಸಂಪಾದಿಸಬೇಕು. ಇನ್ನು, ನೀನು ಹೋಗುವುದು ನನಗೆ ದುಃಖ; ಆದರೆ ಅದು ಲೋಕನೀತಿ—ಪ್ರಿಯಜನರ ವಿರಹ ದುಃಖ. ಇನ್ನು ಕೆಲವು ದಿನಗಳು ಇಲ್ಲೇ ಇರು; ಶಾಸ್ತ್ರಗಳನ್ನು ಮತ್ತೊಮ್ಮೆ ಅಧ್ಯಯನ ಮಾಡಿ, ಸಂಶಯಗಳಿದ್ದರೆ ಪರಿಹರಿಸಿಕೊ" ಎಂದು ಹೇಳುತ್ತಿರುವಲ್ಲಿ ಗುರುವಿನ ಕಣ್ಣುಗಳಿಂದ ನೀರು ಧಾರೆ ಧಾರೆಯಾಗಿ ಸುರಿಯ ಹತ್ತಿತು. ಮತ್ತೆ, "ಮಗು, ಈ ಜನ್ಮದಲ್ಲಿ ನಾವಿಬ್ಬರೂ ಮತ್ತೆ ಸಂಧಿಸಲಾರೆವು. ಇರುವಷ್ಟು ದಿನ ನಾನು ನಿನ್ನನ್ನು ಸದಾ ಸ್ಮರಿಸುತ್ತೇನೆ; ನೀನೂ ನನ್ನನ್ನು ಹೃದಯದಲ್ಲಿಟ್ಟುಕೊಂಡಿರು. ಮುಂದೆ ಧ್ಯಾನ ಮಧ್ಯದಲ್ಲಿ ನಿನ್ನ ದೇಹಕ್ಕೆ ಬಲವಾದ ಗಂಡಾಂತರ ಒದಗುವದೆಂದು ನನ್ನ ಭಯ; ಅಂಥ ಸಮಯ ಬಂದಾಗ ಇಗೋ ಈ ಕಡತವನ್ನು ತೆಗೆದು ನೋಡು" ಎಂದು ಹೇಳಿ ಕಡತವನ್ನು ಅವನ ಕೈಲಿಟ್ಟನು. ನಂತರ ತನ್ನಾಕೆಯನ್ನು ಕರೆದು—"ನೋಡು, ಮಿಲರೇಪ ನಾಳೆ ಪ್ರಯಾಣ ಬೆಳೆಸುವವನಿದ್ದಾನೆ. ಔತಣ ಸಮಾರಂಭ ನಡೆಯಬೇಕಲ್ಲವೆ? ಅವನ ಜತೆ ನಾನು ಸ್ವಲ್ಪದೂರ ಹೋಗಿಬರುತ್ತೇನೆ, ಅಣಿಮಾಡಿರುವೆಯಾ?"—ಎಂದ. ಅಂದು ರಾತ್ರಿ ಗುರುಶಿಷ್ಯರಿಬ್ಬರೂ ಮಾತಾಡುತ್ತ ಒಟ್ಟಿಗೆ ಮಲಗಿದರು.

ಗುರುಪತ್ನಿ ಕೆಲಸ ಎಲ್ಲ ತೀರಿಸಿಕೊಂಡು ಬಂದು ಗಟ್ಟಿಯಾಗಿ ಅಳಲು ಮೊದಲಿಟ್ಟಳು. ಗುರು ಸಂತೈಸಿದ: "ಅಳುವಿಯೇಕೆ? ಮಿಲರೇಪನಿಗೆ ತಾರಕಮಂತ್ರ ಸಿದ್ಧಿಸಿ ಧ್ಯಾನಕ್ಕೆಂದು ಏಕಾಂತಕ್ಕೆ ಹೋಗುತ್ತಿದ್ದಾನೆ. ಅವನನ್ನು ಕುರಿತು ದುಃಖ ಸಲ್ಲದು. ಸಂಸಾರದಲ್ಲಿ ಅರಿವಿಲ್ಲದೆ ತೊಳಲುತ್ತಿರುವ ಅಸಂಖ್ಯಾಕ ಜೀವಿಗಳನ್ನು ಕಂಡು ಅಳಬೇಕಷ್ಟೆ". ಆದರೂ ಪ್ರಬುದ್ಧನಾದ ತನ್ನ ಮಗನನ್ನು ಮೊನ್ನೆ ಕಳೆದುಕೊಂಡ ಆ ಹೆಂಗರುಳು ಈಗ ಪುತ್ರತುಲ್ಯನಾಗಿ ತನಗೆ ಅತಿ ಮುದ್ದಿನವನಾದ ಮಿಲರೇಪ ದೂರ ಹೋಗುವ ಅವಸರದಲ್ಲಿ ದುರ್ಭರವಾದ ಶೋಕಕ್ಕೆ ತುತ್ತಾ ಯಿತು. ಆಕೆಯ ಅಳುವನ್ನು ಕಂಡು ಮಿಲರೇಪನೂ ಸಹಿಸ ಲಾರದೆ ಅಳಲು ಮೊದಲಿಟ್ಟನು; ಇವರಿಬ್ಬರೂ ಅಳಲು ಗುರು ತಾನೂ ಅಳಲಾರಂಭಿಸಿದನು. ಹೀಗೆಯೇ ರಾತ್ರಿಯೆಲ್ಲ ಕಳೆಯಿತು.

ಮರುದಿನ ಬೆಳಗಿನ ಜಾವ ಮಿಲರೇಪ ಪ್ರಯಾಣಕ್ಕೆ ಸಿದ್ಧ ನಾದನು. ಗುರು, ಗುರುಪತ್ನಿ, ಮಠದ ಮಂದಿ, ಒಟ್ಟು ಹದಿಮೂರು ಜನ ಮಿಲರೇಪನೊಂದಿಗೆ ಐದು ಮೈಲಿಗಳ ದೂರ ಹೋದರು. ಅಲ್ಲಿ ಒಂದು ಊಟಮಾಡಿ ಹವಿಶ್ಮೃಸಿ ಬರುತ್ತಿರಲು ಪರಸ್ಪರ ಬೀಳ್ಕೊಟ್ಟರು. ಗುರು—"ಮಗು, ನೀನು ಸಂನ್ಯಾಸಿ; ಪ್ರಪಂಚದ ಯಾವ ಆಸೆಗೂ ಬಲಿಯಾಗದಿರು. ಮಂದಿಯೊಂದಿಗೆ ವ್ಯರ್ಥಸಲ್ಲಾಪ ನಿನಗೆ ಸಲ್ಲದು; ಮಂದಿಗೆ ಪ್ರಾಪಂಚಿಕ ಸಂಪತ್ತೇ ಧ್ಯೇಯ. ಆದರೆ ನಮಗೆ ಧ್ಯಾನವೇ ಭೂಷಣ. ಇಲ್ಲಿಂದ ಹೊರಟವನು ನೇರವಾದ ರಾಜಮಾರ್ಗವನ್ನು ಹಿಡಿ; ಅಲ್ಲಲ್ಲಿ ತಿರುಗಾಡದಿರು, ಕಳ್ಳಕಾಕರ ಹಾವಳಿ ಈ ಕಡೆ ಹೆಚ್ಚು. ಸ್ಗೊಗ್ಪಾನ ಬಳಿ ಹೋಗಿ ಅಲ್ಲಿ ನಿಮ್ಮ ಆಧ್ಯಾತ್ಮಿಕ ಅನುಭವ ಗಳನ್ನು ಪರಸ್ಪರ ವಿಚಾರಮಾಡಿ. ಆದರೆ ಎಲ್ಲೂ ಏಳುದಿನಗಳಿಗೆ ಮೀರಿ ಇರದಿರು. ನಿಮ್ಮ ಮನೆಯನ್ನು ನೋಡಿಕೊಂಡು ನಂತರ

ಅರಣ್ಯಪ್ರದೇಶವನ್ನು ಪ್ರವೇಶಮಾಡು; ಅಲ್ಲಿ ನಿರಂತರವಾದ ಧ್ಯಾನದಲ್ಲಿ ನಿರತನಾಗಿರು. ಅದರಿಂದ ನಿನಗೆ ಶ್ರೇಯಸ್ಸು, ನಿಖಿಲ ಜೀವಿಗಳಿಗೆ ಹಿತ. ನಿನಗೆ ಮಾರ್ಗದಲ್ಲಿ ಮಂಗಳವಾಗಲಿ; ಸಕಲ ದೇವಗಣಗಳೂ ನಿನ್ನನ್ನು ಸರ್ವದಾ ಕಾಪಿಡಲಿ"—ಎಂದು ಪ್ರಾರ್ಥಿಸಿದ. ಗುರುಪತ್ನಿ ಮುಂದೆ ಬಂದು ಮಿಲರೇಪನ ಮೈದಡವಿ ಅವನ ತಲೆಯನ್ನು ನೇವರಿಸಿ, "ಮಗು, ನನ್ನ ಹೃದಯದ ಉದ್ವೇಗ ವನ್ನು ತಡೆದು ಹೇಳುತ್ತಿದ್ದೇನೆ, ನಿನ್ನ ಸೌಖ್ಯ ಅಭ್ಯುದಯ ಸಿದ್ಧಿಗಳಿಗಾಗಿ ನನ್ನ ನಿರಂತರ ಪ್ರಾರ್ಥನೆ ಎಲ್ಲ ದೇವತೆಗಳ ಪದತಲದಲ್ಲಿ ಸರ್ವದಾ ಇದೆ. ಗುರುವಿನ ಉಪದೇಶ ಮರೆಯ ದಿರು; ನಿನ್ನ ತಾಯಿಯಾದ ನನ್ನನ್ನು ಮರೆಯದಿರು." ಎಂದವಳೆ ದುಃಖ ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮಿಲ ರೇಪ ಅವರಿಬ್ಬರ ಪಾದಗಳಿಗೆರಗಿ ಅಭಿವಾದನೆ ಮಾಡಿ ಬೀಳ್ಕೊಟ್ಟು ಅವರು ಕಾಣುವವರೆಗೆ ಅವರ ದಿಕ್ಕಿಗೇ ಮುಖ ಮಾಡಿ ಹಿಂದೆ ಹಿಂದೆ ಸರಿದು ಹೊರಟ.

---

# ಮಿಲರೇಪನ ಅಳಲು

ಮಿಲರೇಪ ಮೊದಲು ಲಾಮಸ್ಕೋಗ್ಡುನ್‌ನ ಮಠಕ್ಕೆ ಬಂದು ಅಲ್ಲಿ ಅವನೊಡನೆ ವಿಚಾರವಿನಿಮಯ ಮಾಡುತ್ತ ಒಂದೆರಡು ದಿನ ತಂಗಿದ್ದು ನಂತರ ತನ್ನ ಊರಿನ ದಿಕ್ಕಿನಲ್ಲಿ ತೆರಳಿದನು. ಊರು ಮುಟ್ಟುತ್ತಲೇ ಊರಿಗೆ ಸಮೀಪದ ಒಂದು ದೊಡ್ಡ ಬಂಡೆಯ ಮೇಲೆ ಐದಾರು ಕುರುಬರು ಮಾತಾಡುತ್ತಿದ್ದುದನ್ನು ಕಂಡು ಆ ಊರಿಗೆ ಹೊಸಬನಂತೆ ನಟಿಸಿ ಅಲ್ಲಿಯ ವಿದ್ಯಮಾನಗಳ ವಿವರಗಳನ್ನೆಲ್ಲ ವಿಚಾರಿಸಿದನು. ಕ್ರಮೇಣ, ದೂರದಲ್ಲಿ ಕಾಣು ತ್ತಿದ್ದ ತನ್ನ ಪಾಳುಮನೆಯ ಕಡೆ ಬೆರಳು ತೋರಿಸಿ—"ಅದೇನು?"—ಎಂದು ಪ್ರಶ್ನಿಸಿದ. ಕುರುಬನೊಬ್ಬ—"ಅಯ್ಯೋ, ಮೊದಲಿಗೆ ಅದು ಶ್ರೀಮಂತರೊಬ್ಬರ ಅರಮನೆ; ಈಗ ದೆವ್ವಭೂತ ಗಳ ನಿವಾಸ. ಆ ಶ್ರೀಮಂತನಿಗೆ ಒಬ್ಬನೇ ಮಗ; ಸಾಯುವ ಸಮಯದಲ್ಲಿ ಅಪ್ರಾಪ್ತವಯಸ್ಕನಾಗಿದ್ದ ಮಗನ ರಕ್ಷಣೆಯ ಹಾಗೂ ತನ್ನ ಆಸ್ತಿಯ ಮೇಲ್ವಿಚಾರಣೆಯನ್ನು ಕಪಟಿಯಾದ ತನ್ನ ತಮ್ಮನಿಗೆ ಬಿಟ್ಟನಂತೆ. ಆತ ಅನ್ಯಾಯದಿಂದ ಈ ಮಗ-ತಾಯಿ ಇಬ್ಬರನ್ನೂ ಓಡಿಸಿ ಆಸ್ತಿಯನ್ನೆಲ್ಲ ತನ್ನದು ಮಾಡಿಕೊಂಡುಬಿಟ್ಟ ನಂತೆ. ಮಗ ವಯಸ್ಸಿಗೆ ಬಂದಾಗ ಅವನಿಗೆ ಒಂದು ಕುರುಡು ಕಾಸೂ ದೊರೆಯಲಿಲ್ಲ. ಸರಿ, ಮಗ ದ್ವೇಷದಿಂದ ಮಂತ್ರವಿದ್ಯೆ ಅಭ್ಯಾಸ ಮಾಡಿ ಊರಿಗೆ ಊರನ್ನೇ ನಾಶಮಾಡಿಬಿಟ್ಟ. ಅವನ ಕುಲ ದೇವತೆಗಳು ಅವನ ಮನೆಯಲ್ಲಿ ನಿಂತುಬಿಟ್ಟವು; ಹೀಗಾಗಿ ಅವನ ಮನೆಗಿರಲಿ, ಅವನ ಮನೆಯಿರುವ ದಿಕ್ಕಿಗೆ ಮುಖ ಮಾಡಲೂ ಜನ ಹೆದರುತ್ತಾರೆ. ಆ ಹುಡುಗನ ತಾಯಿ ಸತ್ತು ಎಂಟು ವರ್ಷಗಳಾದವು; ಅವಳ ಹೆಣ ಇನ್ನೂ ಅಲ್ಲೇ ಬಿದ್ದಿದೆ;

ಅಲ್ಲಿ ಹೋಗುವ ಧೈರ್ಯ ಯಾರಿಗೂ ಇಲ್ಲ. ಆ ಹುಡುಗನಿಗೆ ಒಬ್ಬಳೇ ತಂಗಿಯಿದ್ದಳು; ಆಕೆ ಈಗ ಹುಚ್ಚಿಯಾಗಿ ಊರೂರು ಅಲೆಯುತ್ತಿದ್ದಾಳೆಂದು ಸುದ್ದಿ. ನೀನು ಸಂನ್ಯಾಸಿ; ಏನಾದರೂ ಅಲ್ಲಿಗೆ ಹೋಗುವ ಧೈರ್ಯ ಮಾಡಿದೆಯಾದರೆ ಬಹಳ ಧರ್ಮ ಗ್ರಂಥಗಳು ಅಲ್ಲಿ ದೊರೆತಾವು"—ಎಂದ. ಮಿಲರೇಪ ಮುಂದೆ ಹೋಗುವವನಂತೆ ನಟಿಸಿ, ಪಕ್ಕದ ನಿರ್ಜನ ಪ್ರದೇಶದ ಗಿಡವೊಂದರ ಕೆಳಗೆ ಕುಳಿತು ಸೂರ್ಯ ಮುಳುಗುವವರೆಗೂ ಆರ್ತನಾಗಿ ಅಳುತ್ತಿದ್ದ; ತನ್ನ ತಾಯಿಯ ಮರಣದ ಸುದ್ದಿಯೂ ತಂಗಿ ಅನಾಥೆಯಾದ ಸುದ್ದಿಯೂ ಅವನ ಹೃದಯವನ್ನು ಹಿಂಡಿದವು; ವೇದನೆ ಪರಮಾವಧಿಯನ್ನು ಮುಟ್ಟಿತು.

ರಾತ್ರಿಯಾದಮೇಲೆ ಎದ್ದು ತನ್ನ ಮನೆಯ ಬಳಿಗೆ ಬಂದನು; ಮುಂಚೆ ದೇವಾಲಯದಂತೆ ಸರ್ವಸುಂದರವಾಗಿದ್ದ ಭವನ ಈಗ ಮುರಿದುಬಿದ್ದು, ರಾಶಿ ರಾಶಿ ಧೂಳು ತುಂಬಿ, ಪಕ್ಷಿಗಳು ಗೂಡುಕಟ್ಟಿ, ಇಲಿಗಳು ಬಿಲತೋಡಿ ಶಿಥಿಲವಾಗಿತ್ತು. ದಿಙ್ಮೂಢನಾದ ಮಿಲರೇಪ ಒಳಗೆ ನುಗ್ಗಿ ನಡುಮನೆಯ ಮಧ್ಯೆ ಮಣ್ಣು, ಚಿಂದಿ ಬಟ್ಟೆಗಳು ಹರಡಿ ಕುರುಚಲು ಗಿಡಗಳು ಬೆಳೆದುಕೊಂಡಿದ್ದ ಜಾಗವನ್ನು ಕಂಡೊಡನೆ ಏನೋ ಮನಸ್ಸಿಗೆ ಹೊಳೆದು ಓಡಿ ಬಂದು ಆ ಕಸವನ್ನು ಕೆದಕಿದ. ಒಳಗಡೆ ಮನುಷ್ಯನ ಮೂಳೆಗಳ ರಾಶಿ ಇತ್ತು! ತಟ್ಟನೆ ಅದು ತನ್ನ ತಾಯಿಯ ಅವಶೇಷವೆಂದು ತಿಳಿದು ಕುಸಿದು ಬಿದ್ದು ಓ ಎಂದು ಅಳತೊಡಗಿದ. ತನ್ನ ತಾಯಿಯನ್ನು ಕಂಡೇನೆ ಎಂದು ಹಂಬಲಿಸುತ್ತಿದ್ದ ಮಗ ಆಕೆಯ ಮೂಳೆಗಳ ರಾಶಿಯ ಮುಂದೆ ನಿಂತಿದ್ದ! ಮಿಲರೇಪನಿಗೆ ದುಃಖದ ಭರದಲ್ಲಿ ಪ್ರಜ್ಞೆ ತಪ್ಪಿತು. ಪ್ರಜ್ಞೆ ತಿಳಿದೆದ್ದಾಗ ಗುರುವಿನ ಉಪದೇಶಗಳನ್ನು ನೆನಪಿಗೆ ತಂದುಕೊಂಡು ಧ್ಯಾನದಲ್ಲಿ ಕುಳಿತ. ಆಗ ಅವನಿಗೆ

ಸಂಸಾರದ ಕ್ಷಣಭಂಗುರಸ್ಥಿತಿ, ಜಗತ್ತಿನ ದುಃಖಸಮುದಯ, ಸಮಾಧಿಯೋಗದ ಆವಶ್ಯಕತೆ ಇವುಗಳ ಅರಿವಾಯಿತು. ತನ್ನ ತಾಯಿಯ ಅಸ್ಥಿಗಳನ್ನು ಸಾಂಪ್ರದಾಯಿಕವಾಗಿ ಸಂಸ್ಕಾರ ಮಾಡಿ ತಾನು ಸಮೀಪದ ಗುಹೆಯಲ್ಲಿ ಅಖಂಡ ಧ್ಯಾನಮಗ್ನನಾಗಿ ಕುಳಿತು ದೇಹ ನೀಗಿಕೊಳ್ಳುವೆನೆಂದು ಸಂಕಲ್ಪ ಮಾಡಿದ; ಭವದ ಹಂಗನ್ನೆಲ್ಲ ತೊರೆದು ಎಲ್ಲ ತೆರನಾದ ಆಶೆಗಳನ್ನೂ ನಿರ್ಮೂಲಮಾಡಿಕೊಂಡು, ನಿರ್ವಾಣವೊಂದೇ ಧ್ಯೇಯವೆಂದು, ವಿಜನಪ್ರದೇಶದಲ್ಲಿ ಏಕಾಂತದಲ್ಲಿ ಸದಾ ಧ್ಯಾನನಿರತನಾಗಿರುವೆನೆಂದು ನಿರ್ಧರಿಸಿಕೊಂಡ. ತನ್ನ ಮನೆಯ ಈ ಅಸ್ತವ್ಯಸ್ತ ಸ್ಥಿತಿ ಅವನಿಗೆ ಬುದ್ಧ ಶಾಸನದಲ್ಲಿ ನಿಶ್ಚಲವಾದ ಶ್ರದ್ಧೆಯನ್ನು ತಂದಿತು.

ಮಿಲರೇಪ ಎದ್ದು ತನ್ನ ತಾಯ ಮೂಳೆಗಳನ್ನು ಆಯ್ದು, ಚೆನ್ನಾಗಿ ಧೂಳು ಜಾಡಿಸಿ, ತನ್ನ ಪಂಚೆಯಲ್ಲಿ ಕಟ್ಟಿಕೊಂಡು ನಡುವಿಗೆ ಬಿಗಿದ; ಚೆಲ್ಲಾಪಿಲ್ಲಿಯಾಗಿ ಹರಡಿ ಬಿದ್ದಿದ್ದ ಧರ್ಮಗ್ರಂಥಗಳನ್ನೆಲ್ಲ ಶೇಖರಿಸಿ ಕಟ್ಟಿ ಬೆನ್ನಮೇಲೆ ಹೊತ್ತು ಹೊರಟ. ತನ್ನ ಪೂರ್ವದ ಉಪಾಧ್ಯಾಯನ ಮನೆಗೆ ಬಂದ. ಆತ ಸತ್ತಿದ್ದು ಅವನ ಮಗ ಮನೆಯ ಯಜಮಾನನಾಗಿದ್ದ. ಮಿಲರೇಪ ಅವನನ್ನೂ ತಿಳಿದಿದ್ದುದರಿಂದ ಅವನ ಬಳಿ ಬಂದು ತನ್ನ ತಾಯಿಯ ಅಪರ ಕ್ರಿಯೆಗಳಿಗೆ ಪುರೋಹಿತನಾಗೆಂದು ಬೇಡಿಕೊಂಡ. ಆದರೆ ಅವನ ಕುಲದೇವತೆಗಳ ಹಾವಳಿಗೆ ಹೆದರಿ ಆತ ಒಪ್ಪದಿರಲು ಮಿಲರೇಪ ವಿಧ ವಿಧವಾಗಿ ತರ್ಕಿಸಿ ಒಡಂಬಡಿಸಿದ. ಆ ದಿನ ಸಂಸ್ಕಾರಗಳನ್ನು ಯಥಾವಿಧಿಯಾಗಿ ಮಾಡಿ ಮೂಳೆಗಳನ್ನು ಕುಟ್ಟಿ ಪುಡಿಮಾಡಿ ನದಿಯಲ್ಲಿ ಕದಡಿ ತರ್ಪಣ ಬಿಟ್ಟು ಆ ಧರ್ಮಗ್ರಂಥಗಳನ್ನೆಲ್ಲ ಪುರೋಹಿತನಿಗೆ ದಕ್ಷಿಣಾ ರೂಪದಲ್ಲಿ ಕೊಟ್ಟು ಹೊರಡಲನುವಾದ. ಆದರೆ ಧರ್ಮನಿಷ್ಠನಾದ ಆ ಗುರುಪುತ್ರ ಮಿಲರೇಪನನ್ನು ಒಂದು ರಾತ್ರಿಯಾದರೂ ತನ್ನ ಮನೆಯಲ್ಲಿ

ತಂಗಿಹೋಗೆಂದು ನಿರ್ಬಂಧ ಮಾಡಿದ. ಒಲ್ಲದ ಮನಸ್ಸಿನಿಂದ ಮಿಲರೇಪ ಆ ರಾತ್ರಿ ಅಲ್ಲಿ ಕಳೆದ. ಇಬ್ಬರೂ ತಮ್ಮ ಪೂರ್ವೋತ್ತರಗಳನ್ನೆಲ್ಲ ಮಾತಾಡುತ್ತ ಇರುವಲ್ಲಿ ಗುರುಪುತ್ರ, "ಮಿಲರೇಪ, ಯುವಾವಸ್ಥೆಯಲ್ಲಿ ಕ್ರೂರಾಚರಣೆ ಮಾಡಿದಿ; ಆದರೆ ಈಗ ಮಹಾನ್ ಸಂತನಾಗಿದ್ದೀ. ಇದೀಗ ಅದ್ಭುತ. ನಿನ್ನ ಗುರುವಿನ ಸಾಮರ್ಥ್ಯ ಅಪೂರ್ವವಾದುದು. ಆದರೆ ನಿನ್ನಿಂದ ಜನಗಳಿಗೆ ಉಪಕಾರವಾಗಬೇಕು. ನಿನ್ನ ಗುರುವಿನಂತೆಯೇ ನೀನೂ ಮದುವೆ ಮಾಡಿಕೊಂಡು ನಿನ್ನ ಮನೆಯನ್ನು ಜೀರ್ಣೋದ್ಧಾರ ಮಾಡಿ ಇಲ್ಲಿ ಲಾಮನಾಗಿ ವಾಸಿಸಬಾರದೇಕೆ?" ಎಂದು ಕೇಳಿದ. ಅದಕ್ಕೆ ಮಿಲರೇಪ, "ಈ ವಿಚಾರದಲ್ಲಿ ನನ್ನ ಗುರುವನ್ನು ನಾನು ಅನುಕರಿಸಲು ಯತ್ನಿಸುವುದು ಸಿಂಹದ ನೆಗೆತವನ್ನು ಅಳಿಲು ಅನುಕರಿಸುವಂತೆ ಆಗುವುದು; ನನ್ನ ಸರ್ವನಾಶಕ್ಕೆ ಅದು ಸಾಧನ ಅಷ್ಟೆ. ನನ್ನ ಜೀವಕ್ಕೆ ಸಂಸಾರ ಒಗ್ಗದು; ನನಗೆ ಹಿತವೆಂದರೆ ಏಕಾಕಿಯಾದ ಏಕಾಂತ ಧ್ಯಾನಾತ್ಮಕ ಜೀವನ. ನನಗೆ ಧ್ಯಾನವೊಂದು ವಿನಾ ಬೇರೇನೂ ಬರದು; ಬೇರೆ ಯಾವುದರಲ್ಲೂ ಕೌಶಲ ಪಡೆಯುವುದು ನನ್ನಿಂದಾಗದು; ನನಗೆ ರುಚಿಸದು. ಅಲ್ಲದೆ ನನ್ನಂತೆ ಕಷ್ಟ ಕಂಡವರಿಗೆ ಸುಖಜೀವನ ಹಿಡಿಸುವುದಿಲ್ಲ" ಎಂದುತ್ತರವಿತ್ತ. ಗುರುಪುತ್ರ ಅವನ ಸ್ಪಷ್ಟ ಸಂಕಲ್ಪಕ್ಕೆ ಮೆಚ್ಚಿ ಮಣಿದ.

ಮರುದಿನ ಬೆಳಗ್ಗೆ ಗುರುಪುತ್ರ ಒಂದು ಚೀಲ ಹಿಟ್ಟು, ಸ್ವಲ್ಪ ಬೆಣ್ಣೆ, ಬೇರೆ ಸ್ವಲ್ಪ ತಿಂಡಿ, ಇಷ್ಟನ್ನು ಮಿಲರೇಪನ ಪಾಥೇಯಕ್ಕೆಂದು ಕಟ್ಟಿಕೊಟ್ಟು ಬೀಳ್ಕೊಟ್ಟ. ಮಿಲರೇಪ ತನ್ನ ಮನೆಯ ಹಿಂಬದಿಯಲ್ಲಿದ್ದ ದೊಡ್ಡ ಗುಡ್ಡದ ಗವಿಯೊಂದರ ಒಳಹೊಕ್ಕು ಅಲ್ಲಿ ಧ್ಯಾನಕ್ಕೆ ಕುಳಿತ. ಗುರುಪುತ್ರ ಕೊಟ್ಟಿದ್ದ ಆಹಾರ ಪದಾರ್ಥಗಳನ್ನು ಮಿತವಾಗಿ ಸೇವಿಸುತ್ತಿದ್ದುದರಿಂದ ಅಷ್ಟು

ಮಿಲರೇಪನಿಗೆ ಹಲವಾರು ತಿಂಗಳುಗಳಿಗೆ ಸಾಕಾಯಿತು ; ಕೂತಲ್ಲಿಂದ ಏಳದೆ ರಾತ್ರಿ ಹಗಲೆನ್ನದೆ ಅಖಂಡವಾಗಿ ಧ್ಯಾನದಲ್ಲಿರುತ್ತಿದ್ದ. ಅಲ್ಪ ಆಹಾರದಿಂದಾಗಿ ದೇಹ ಕೃಶವಾಯಿತು ; ಆದರೆ ಸಾಧನೆ ಭರದಲ್ಲಿ ಸಾಗಿತು.

ಬಳಿಯಿದ್ದ ಆಹಾರ ಮುಗಿಯುವ ವೇಳೆಗೆ ಮಿಲರೇಪನ ಬಲವೂ ಸಾಕಾದಷ್ಟು ಕುಗ್ಗಿತು. ಉಪವಾಸವಿದ್ದರೆ ಧ್ಯಾನಕ್ಕೆ ಆತಂಕವೆಂದು ಬಗೆದು ಮಿಲರೇಪ ಊರಿನ ಕೆಲವು ಮನೆಗಳಿಂದ ಭಿಕ್ಷೆ ಬೇಡಲು ಹೊರಟ ; ದೇಹ ಬಲು ಬಳಲಿದ್ದುದರಿಂದ ಒಂದು ಕೋಲೂರಿ ನಡೆಯಬೇಕಾಯಿತು. ಆದರೆ ಅವನ ದುರ್ದೈವದಿಂದ ಅವನು ಮುಟ್ಟಿದ ಮೊದಲ ಮನೆಯೇ ಅವನ ಚಿಕ್ಕಮ್ಮನದು. ಆಕೆ ಮಿಲರೇಪನನ್ನು ಕಂಡೊಡನೆ ತನ್ನ ನಾಯಿಗಳನ್ನು ಛೂ ಬಿಟ್ಟಳು. ಸಿಂಹಗಳಂತಿದ್ದ ಅವು ಬಗುಳಿಕೊಂಡು ಅವನನ್ನು ಮುತ್ತಿದವು. ಮೊದಲೇ ಬಳಲಿ ಬೆಂಡಾಗಿದ್ದ ಮಿಲರೇಪ ಕಷ್ಟದಿಂದ ಕೈಲಿದ್ದ ಕೋಲಿನಲ್ಲಿ ಅವನ್ನು ನಿವಾರಿಸುತ್ತ ಹಿಂದೆ ಹಿಂದೆ ಸರಿಯುತ್ತಿದ್ದ. ಸ್ವಲ್ಪದೂರ ಹೋಗುವುದರಲ್ಲೇ ಎಡವಿ ಬಿದ್ದುಬಿಟ್ಟ. ಅವನ ಚಿಕ್ಕಮ್ಮ ಕೋಪದಿಂದ ಕಿಡಿಕಿಡಿಯಾಗಿ ಓಡಿ ಬಂದು—"ಎಲೆ ಪಾಪಿ! ಘಾತಕ! ಸ್ವಜನವನ್ನೇ ನಾಶ ಮಾಡಿದೆಯಲ್ಲ! ಊರಿಗೆ ಊರನ್ನೇ ಕಷ್ಟದಲ್ಲಿ ಮುಳುಗಿಸಿದೆಯಲ್ಲ! ಏನೆಂದು ನಿಮ್ಮಮ್ಮ ನಿನ್ನನ್ನು ಹೆತ್ತಳು! ಊರಿಗೆ ಮತ್ತಾವ ಕೇಡು ಮಾಡಲು ಬಂದಿರುವೆ?"—ಎಂದು ಮೂದಲಿಸಿ ಅವನ ದೊಣ್ಣೆಯಿಂದಲೇ ಅವನನ್ನು ಮೈ ಮುರಿಯ ಹೊಡೆದಳು. ಮಿಲರೇಪನ ಮೈಯೆಲ್ಲ ಗಾಯವಾಗಿ ರಕ್ತಸುರಿಯಹತ್ತಿತು. ಆಕೆ ಬಯ್ಯುತ್ತಾ ಮನೆಗೆ ಹಿಂದಿರುಗಿದಳು.

ಮಿಲರೇಪ ಪ್ರಯಾಸದಿಂದ ಎದ್ದು ಉಳಿದ ಮನೆಗಳಿಂದ ಭಿಕ್ಷೆ ಬೇಡಿ ಮುಂದೆ ನಡೆಯುತ್ತಿದ್ದ. ಸ್ವಲ್ಪ ದೂರ ಸಾಗು

ವಲ್ಲೇ ಅವನ ಚಿಕ್ಕಪ್ಪ ಅಕಸ್ಮಾತ್ ಮುಂದೆ ಬರುತ್ತಿದ್ದವನು ಮಿಲರೇಪನನ್ನು ಕಂಡನೋ ಇಲ್ಲವೋ "ಆಹಾ! ನನಗೆ ವಯಸ್ಸು ಮೀರಿ ಮುದುಕನಾಗಿ ದುರ್ಬಲನಾಗಿದ್ದೇನೆ; ಆದರೂ ಚಿಂತೆಯಿಲ್ಲ, ನಿನ್ನ ಸಮಾಗಮಕ್ಕೇ ಕಾಯುತ್ತಿದ್ದೆ!" ಎಂದು ಹೇಳಿ ಕಲ್ಲುಗಳನ್ನಾಯ್ದು ಮಿಲರೇಪನಿಗೆ ಹೊಡೆಯ ಹತ್ತಿದ. ಮಿಲರೇಪ ಓಡಿಹೋಗಲು ಪ್ರಯತ್ನ ಪಟ್ಟ. ಆಗ ಅವನ ಚಿಕ್ಕಪ್ಪ ಬಿಲ್ಲಿಗೆ ಹೆದೆಯೇರಿಸಿ ಬಾಣಹೂಡಿ ಅವನನ್ನು ಹಿಂಸಿಸಲಾರಂಭಿಸಿದ: "ಕೇಡಿಗ! ಕಟುಕ! ನಮ್ಮ ಮನೆಯನ್ನೇ ಮುರಿದೆಯಲ್ಲ! ಊರಿನ ನೂರಾರು ಮಂದಿ ನಿನ್ನ ವಿದ್ಯೆಯಿಂದ ಮಡಿದರು! ಓ ಜನರೇ, ಬನ್ನಿ, ಬನ್ನಿ! ಇಂದು ನಮ್ಮ ಶತ್ರು ಮಿಲರೇಪ ಸಿಕ್ಕಿದ್ದಾನೆ!" ಎಂದು ಕೂಗಿದ. ಜನರೆಲ್ಲ ನೆರೆದು ಕಲ್ಲುಗಳಿಂದ, ಕೋಲಿಂದ ಅವನನ್ನು ಹಿಂಸಿಸಲಾರಂಭಿಸಿದರು. ದಿಕ್ಕುತೋಚದೆ ಮಿಲರೇಪ ಅವರನ್ನು ಹೆದರಿಸಲು "ಓ ನನ್ನ ಕುಲದೇವತೆಗಳೆ! ಡಾಕಿನೀ ಗಣಗಳೆ! ನನ್ನನ್ನು ವಿಪತ್ತಿನಿಂದ ಪಾರು ಮಾಡಿ! ಇವರ ಮಾಂಸವನ್ನು ಹೀರಿ ರಕ್ತವನ್ನು ಕುಡಿಯಲು ಬನ್ನಿ!" ಎಂದು ಅರಚಿದನೋ ಇಲ್ಲವೋ ಜನರೆಲ್ಲ ಬೆದರಿದರು. ಹೊಡೆದವರು ಕ್ಷಮೆ ಬೇಡಿದರು; ಬಯ್ದವರು ಪಶ್ಚಾತ್ತಾಪ ಪಟ್ಟರು; ನೆರೆದವರು ಸಂತೈಸಿದರು. ಚಿಕ್ಕಪ್ಪನೊಬ್ಬನ ವಿನಾ ಎಲ್ಲರೂ ಉಚಿತವಾಗಿ ಭಿಕ್ಷೆಯನ್ನು ನೀಡಿದರು. ಮಿಲರೇಪ ಇಷ್ಟು ಬವಣೆ ಪಟ್ಟು ತನ್ನ ಗುಹಾವಾಸಕ್ಕೆ ಹಿಂದಿರುಗಿದನು.

ಮರುದಿನ ಬೇಸರವಾಗಿ ಭಿಕ್ಷೆಗೇ ಹೋಗದೆ ಗವಿಯಲ್ಲೇ ಕುಳಿತಿದ್ದನು. ಹಿಂದೆ ಇವನೊಂದಿಗೆ ನಿಶ್ಚಿತಾರ್ಥ ಹಾಕಿಸಿದ್ದ ಹುಡುಗಿ ಜೆಸಾಯ್ ಇವನ ಇರವನ್ನು ಅರಿತು ಕಾಣಲೆಂದು ಬಂದಳು; ಬರುವಾಗ ಸೊಗಸಾದ ತಿಂಡಿತೀರ್ಥಗಳನ್ನೆಲ್ಲ ತಂದಳು. ಮಿಲರೇಪ ಅವಳನ್ನು ಆದರದಿಂದ ಬರಮಾಡಿಕೊಂಡು ಕುಳ್ಳಿರಿ

ಸಿದ. ಆಕೆ ಊರಿನ ವಿದ್ಯಮಾನಗಳನ್ನೆಲ್ಲ ವಿಶದವಾಗಿ ಹೇಳುತ್ತಾ ಮಿಲರೇಪನ ತಾಯಿ ತೀರಿಕೊಂಡ ಬಗೆ, ಮಿಲರೇಪನ ತಂಗಿ ಓಡಿಹೋದ ಕಥೆ, ಎಲ್ಲವನ್ನೂ ವಿವರಿಸಿದಳು. ಅವಳಿಗಿನ್ನೂ ಮದುವೆಯಾಗಿರಲಿಲ್ಲ; ಅವಳು ಮಿಲರೇಪನ ವಿಚಾರದಲ್ಲಿ ಅಚಲ ವಾದ ವಿಶ್ವಾಸವಿಟ್ಟಿದ್ದಳು. ಅದನ್ನರಿತು ಮಿಲರೇಪ—"ನೋಡು, ತಂಗಿ, ನಾನು ಸಂನ್ಯಾಸಿಯಾಗಿಬಿಟ್ಟೆ. ನಿನ್ನೊಂದಿಗೆ ನನ್ನ ನಿಶ್ಚಿತಾರ್ಥವಾಗಿದ್ದರೂ ಈಗ ಮದುವೆಯಾಗುವಂತಿಲ್ಲ. ಆದರೆ ನಿನ್ನ ಸುಖಕ್ಕಾಗಿ ನಾನು ಸರ್ವದಾ ಪ್ರಾರ್ಥಿಸುತ್ತಿರು ತ್ತೇನೆ. ಅಲ್ಲದೆ, ಇನ್ನೊಂದು ವಿಚಾರ. ಈ ನನ್ನ ಮನೆ, ಅದಕ್ಕೆ ಸೇರಿದ ಫಲವತ್ತಾದ ಭೂಮಿ ಎಲ್ಲ ಇವೆ. ಇವು ನನ್ನ ತಂಗಿಗೆ ಸೇರಬೇಕಾದದ್ದು. ಅವಳು ಹಿಂದಿರುಗಿ ಬರುವವರೆಗೂ ಇವನ್ನು ನೀನು ಭೋಗಿಸುತ್ತಿರು. ನನಗೆ ಅರಣ್ಯದ ಗುಹೆಯೇ ಮನೆ; ನನ್ನ ಊಟ ಇಲಿಗಳೂ ಹಕ್ಕಿಗಳೂ ಮಾಡುವ ರೀತಿಯಲ್ಲಿ. ನನಗೆ ಆಸ್ತಿಪಾಸ್ತಿಗಳು ಬೇಡ. ಈ ನನ್ನದೆನ್ನುವ ಪ್ರಾಪಂಚಿಕ ಸಂಪತ್ತಿನಿಂದ ನೀನು ಸುಖವಾಗಿರು; ನನ್ನನ್ನು ಬದುಕಿರುವ ಮನುಷ್ಯನೆಂದೇ ಬಗೆಯದಿರು"—ಎಂದು ಹೇಳಿದ. ಸಂನ್ಯಾಸಿ ಗಳು ಮಠಾಧಿಪತಿಗಳಾಗಿ ಊರಿನಲ್ಲಿ ಗಣ್ಯರಾಗಿ ಪ್ರಬಲರಾಗಿರು ವುದನ್ನು ಅರಿತಿದ್ದ ಆಕೆಗೆ ಮಿಲರೇಪನ ಮನೋಧರ್ಮ ಅಪೂರ್ವ ವೆಂದು ತೋರಿತು; ಆದರೆ ಮಿಲರೇಪ ಜಗತ್ತಿನ ದುಃಖಸ್ವರೂಪ ವನ್ನು ನಿರೂಪಿಸಿ ವೈರಾಗ್ಯದ ವಿಚಾರ ಹೇಳಿದಾಗ ಆಕೆಗೂ ವಿರಕ್ತಿ ಹುಟ್ಟಿ ಮನೆ-ಭೂಮಿಗಳು ತನಗೆ ಬೇಡವೆಂದು ಎಲ್ಲಿಯೋ ಹೊರಟುಬಿಟ್ಟಳು!

ಅಂದು ಮಧ್ಯಾಹ್ನದ ವೇಳೆಗೆ ಮಿಲರೇಪನ ಈ ನಿರ್ಧಾರದ ಸುದ್ದಿ ಹೇಗೋ ಅವನ ಚಿಕ್ಕಮ್ಮನ ಕಿವಿ ಮುಟ್ಟಿ ಆಕೆ ಉಪ ಹಾರದ್ರವ್ಯಗಳನ್ನು ಹಿಡಿದು ಮಿಲರೇಪನ ಗುಹಾವಾಸಕ್ಕೆ

ಬಂದಳು. ಬಂದು ಮಿಲರೇಪನಿಗೆ ನಮಸ್ಕಾರ ಮಾಡಿ—"ನಿನ್ನೆ ಉನ್ಮಾದಾವಸ್ಥೆಯಲ್ಲಿದ್ದ ನಾನು ನಿನಗೆ ಬಹುವಾಗಿ ಅಪಚಾರ ಮಾಡಿದೆ. ಆದರೆ ಭಿಕ್ಷುವಾಗಿ ನಿರ್ಮತ್ಸರನಾದ ನೀನು ಆ ಕ್ಷಣ ನನ್ನನ್ನು ಕ್ಷಮಿಸಿರುವೆಯಲ್ಲವೆ? ಈಗ ನಿನ್ನ ಸೇವೆ ಮಾಡಬೇಕೆಂಬ ಮನಸ್ಸಾಗಿದೆ. ನೀನು ಒಪ್ಪುವೆಯಾದರೆ ನಿನ್ನ ಭೂಮಿಯನ್ನು ಉತ್ತು ನಿನಗೆ ಆಹಾರ ಒದಗಿಸುವೆನು"—ಎಂದು ನುಡಿದಳು. ಮಿಲರೇಪ—"ಆಗಲಿ, ತಿಂಗಳಿಗೆ ಇಪ್ಪತ್ತು ಪಡಿ ಜೋಳ ಕೊಟ್ಟರೆ ನನಗೆ ಸಾಕು; ಉಳಿದ ಬೆಳೆಯನ್ನು ನೀನೇ ಅನುಭವಿಸು"—ಎಂದನು. ಈ ಅನುಕೂಲ ವ್ಯಾಪಾರದಿಂದ ಉಬ್ಬಿದ ಆಕೆ—"ಆದರೆ, ನಿನ್ನ ಮಂತ್ರ ವಿದ್ಯೆಯಿಂದ ನಿನ್ನ ಕುಲದೇವತೆಗಳನ್ನು ನನ್ನ ಮೇಲೆ ಎತ್ತಿ ಕಟ್ಟುವೆಯೊ ಏನೋ?"—ಎಂದಳು. ಮಿಲರೇಪ ನಕ್ಕು—"ಅಮ್ಮ, ನಾನೀಗ ಸಂನ್ಯಾಸಿ, ಮಂತ್ರ ವಿದ್ಯೆಯ ಸೊಲ್ಲನ್ನೇ ಬಿಟ್ಟಿದ್ದೇನೆ"—ಎಂದ. ಆದರೂ ಆಕೆ—"ಸರಿ, ನಾನು ನಿನ್ನನ್ನು ನಂಬದೆ ಇಲ್ಲ, ಆದರೆ ಆ ವಿಚಾರವಾಗಿ ಪ್ರಮಾಣ ಮಾಡಿಬಿಟ್ಟರೆ ನನ್ನ ಮನಸ್ಸಿಗೆ ನೆಮ್ಮದಿ"—ಎಂದಳು. ಅವಳ ಆಶಯದ ವಿಚಾರವಾಗಿ ಮಿಲರೇಪನಿಗೆ ತುಸು ಸಂಶಯವೇ ಆದರೂ ತನ್ನ ಯತ್ಯಾಶ್ರಮಕ್ಕೆ ವಿಹಿತವಾದುದರಿಂದ 'ಇನ್ನು ಮಂತ್ರವಿದ್ಯೆಯನ್ನು ಪ್ರಯೋಗಿಸೆನೆ'ಂದು ಆಕೆಯ ಮುಂದೆ ಪ್ರತಿಜ್ಞೆ ಮಾಡಿದನು. ಸಂತೋಷದಿಂದ ಚಿಕ್ಕಮ್ಮ ಹೊರಟುಹೋದಳು.

ಅಲ್ಲಿಂದ ಎರಡು ತಿಂಗಳ ಕಾಲ ಒಪ್ಪಂದದ ರೀತಿ ಜೋಳವನ್ನು ಮಿಲರೇಪನಿಗೆ ತಂದು ಕೊಡುತ್ತಿದ್ದಳು. ಅನಂತರ ಒಂದು ದಿನ ಅರವತ್ತು ಪಡಿ ಜೋಳ, ಒಂದು ಹಚ್ಚಡ, ಸ್ವಲ್ಪ ಬೆಣ್ಣೆ, ಇಷ್ಟನ್ನು ತಂದು ಮಿಲರೇಪನ ಮುಂದಿಟ್ಟು—"ಅಯ್ಯಾ, ನಿನ್ನ ಸೇವೆ ಮಾಡುವೆನೆಂದು ಊರಿನವರೆಲ್ಲ ನನ್ನ ಮೇಲೆ ಕತ್ತಿ

ಕಟ್ಟಿದ್ದಾರೆ; 'ನಮ್ಮ ಊರಿಗೆ ಈ ಮಿಲರೇಪ ಮಾರಿ; ಈಗ ನಿನ್ನಿಂದ ಮತ್ತೆ ಬಲಿಷ್ಠನಾಗಿ ನಮ್ಮ ಮೇಲೆ ವಿಷ ಕಾರುವನು. ನೀನು ಇನ್ನು ಮುಂದೆ ಅವನಿಗೆ ದವಸ ಕೊಟ್ಟೆಯಾದರೆ ನಿನ್ನನ್ನು ತೀರಿಸಿಬಿಡುವೆವು!' ಎಂದು ನನ್ನನ್ನು ಬೆದರಿಸಿದ್ದಾರೆ. ಅಲ್ಲದೆ ನಿನ್ನನ್ನು ಕೊಲೆ ಮಾಡಲು ಸನ್ನಾಹ ಮಾಡುತ್ತಿದ್ದಾರೆ. ಅದು ಕಾರಣ, ನೀನು ಇಲ್ಲಿರುವುದು ನಿನಗೆ ಹಿತವಲ್ಲ. ನನ್ನ ಮಾತೆಂದು ಅಲಕ್ಷ್ಯ ಮಾಡದೆ ದೂರ ಎಲ್ಲಿಯಾದರೂ ಹೋಗಿ ನೆಲಸು"—ಎಂದಳು. ಇದು ಬರೀ ಸುಳ್ಳಿನ ಕಂತೆಯೆಂದು ಮಿಲರೇಪನಿಗೆ ತಿಳಿಯದೆ ಇರಲಿಲ್ಲ; ಅಥವಾ ಇಂಥ ಸನ್ನಿವೇಶದಲ್ಲಿ ಮಂತ್ರ ವಿದ್ಯೆಯನ್ನು ಪ್ರಯೋಗಿಸಿ ಆಕೆಯಿಂದ ತನ್ನ ಭೂಮಿಯನ್ನು ಪಡೆಯುವುದು ಅನುಚಿತವಾಗಲಿ ಅಸಾಧ್ಯವಾಗಲಿ ಆಗಿರಲಿಲ್ಲ. ಆದರೆ ಕ್ಷಾಂತಿ (ತಾಳ್ಮೆ) ಸಂನ್ಯಾಸಿಗಳಿಗೆ ಪರಮ ಧರ್ಮ; ಅದನ್ನು ಸಾಧಿಸಲು ಈಕೆಯಂಥವರಿಗಿಂತ ಉಚಿತ ವಸ್ತು ಎಲ್ಲಿ ಸಿಕ್ಕೀತು? ಈಕೆಯೇ ತನ್ನ ಸರ್ವಸ್ವವನ್ನೂ ನಾಶಮಾಡಿದಳು; ಪರಮಪಾಪಿಷ್ಠೆ. ಆದರೆ ಆಕೆ ಇಲ್ಲದಿದ್ದರೆ ಮಿಲರೇಪ ಮಾರ್ಪನ ಬಳಿ ಹೋಗಿ ಸಂನ್ಯಾಸಿಯಾಗುತ್ತಿದ್ದನೋ ಇಲ್ಲವೋ, ಯಾರು ಬಲ್ಲರು? ಹಾಗೆ, ಈಕೆಯೇ ಮಿಲರೇಪನ ವೈರಾಗ್ಯದ ಮೂಲ ಹೇತುವಾಗಿದ್ದಳು. ಈ ದೃಷ್ಟಿಯಲ್ಲಿ ಮಿಲರೇಪ ಆಕೆಗೆ ಕೃತಜ್ಞನಾಗಿರಬೇಕು. ಹೀಗೆಲ್ಲ ಚಿಂತಿಸಿ ಮಿಲರೇಪ ನಸುನಕ್ಕು—"ಒಳ್ಳೆಯದಮ್ಮಾ, ನಾನು ಧರ್ಮಜೀವಿ, ಪರಿವ್ರಾಜಕ, ಆ ಭೂಮಿಯನ್ನು ಮಾತ್ರವಲ್ಲ, ನನ್ನ ಮನೆಯನ್ನೂ ನಿನಗೆ ದಾನ ಮಾಡಿದ್ದೇನೆ! ಅದನ್ನು ಅನುಭವಿಸಿ ಸುಖದಲ್ಲಿ ಬಾಳು"—ಎಂದು ಹರಸಿದ. ಅನಾಯಾಸವಾಗಿ ಸಂಪತ್ತು ಸಿಕ್ಕಿದ ಹರ್ಷದಲ್ಲಿ ಆಕೆ—"ಸಂನ್ಯಾಸಿಯೆಂದರೆ ಹೀಗಿರಬೇಕು" ಎಂದು ಸ್ತುತಿಸಿ ಹೊರಟುಹೋದಳು.

# ಯೋಗಾಭ್ಯಾಸ

ಈ ಸಂದರ್ಭದಿಂದ ಮಿಲರೇಪನ ಹೃದಯದಲ್ಲಿ ಮಾನವನ ಕುತ್ಸಿತ ಮನೋಧರ್ಮದ ಬಗ್ಗೆ ವಿಷಾದ ಹೆಚ್ಚಿತು. ಆದರೆ ತನಗೆ ಭವದ ಉಳಿದ ಎರಡು ಬಂಧಗಳೂ ಹೀಗೆ ಕಡಿದು ಬಿದ್ದುದು ಗುರುವಿನ ಕೃಪಾವಿಶೇಷವೆಂದು ಮಿಲರೇಪ ಹಿಗ್ಗಿದ. ತನ್ನ ಚಿಕ್ಕಮ್ಮ ತನಗೆ ಕೊಟ್ಟ ಸಾಮಾನುಸರಂಜಾಮುಗಳನ್ನು ಎತ್ತಿಕೊಂಡು ಊರಾಚೆಯ ಏಕಾಂತ ವಿವಿಕ್ತ ಗುಹೆಯೊಂದನ್ನು ಹೊಕ್ಕು ಅಲ್ಲಿ ಧ್ಯಾನದಲ್ಲಿ ನಿರತನಾದ; ಇನ್ನು ಭಿಕ್ಷೆಗಾಗಲೀ ಸಂಚಾರಕ್ಕಾಗಲೀ ಯಾವ ಜನ ಜಂಗುಳಿಯ ನಡುವೆಯೂ ಹೋಗುವುದಿಲ್ಲೆಂದು ಕಠೋರ ಪ್ರತಿಜ್ಞೆಮಾಡಿದ. "ಇಂಥ ಜನ ನೀಡುವ ಅನ್ನ ಧೂಳಿಗೆ ಸಮಾನ; ಹಸಿವಿನಿಂದ ಜೀವ ಇಂಗಿದರೂ ಚಿಂತೆಯಿಲ್ಲ, ಇನ್ನು ಭಿಕ್ಷೆ ಬೇಡಲು ಹೋಗುವುದಿಲ್ಲ. ಚಳಿಯಿಂದ ಸತ್ತರೂ ಸರಿ, ಬಟ್ಟೆಗಾಗಿ ಒಬ್ಬರಿಂದ ಏನನ್ನೂ ಸ್ವೀಕರಿಸೆನು. ದುಃಖದಿಂದ ತೀರಿಕೊಂಡೆನಾಗಲಿ ಜಗತ್ತಿನ ಸುಖಕ್ಕಾಗಿ ಆಶೆಪಟ್ಟು ಒಂದು ಕಿರುಬೆರಳನ್ನೂ ಆಡಿಸೆನು. ಪ್ರಪಂಚದ ಎಲ್ಲ ವಿಧದ ಹಂಗನ್ನೂ ಸಂಪೂರ್ಣವಾಗಿ ತೊರೆದಿದ್ದೇನೆ. ನನ್ನ ಇಡೀ ಜೀವಿತವನ್ನೇ ನಿರ್ವಾಣದ ಪ್ರಾಪ್ತಿಗಾಗಿ ಮುಡಿಪಿಟ್ಟಿದ್ದೇನೆ" ಎಂದು ಘೋರ ಸಂಕಲ್ಪ ಮಾಡಿ ಪದ್ಮಾಸನದಲ್ಲಿ ಕೂತು ತಪಶ್ಚರ್ಯೆಗಾರಂಭಿಸಿದನು.

ಹೀಗೆ ಒಂದು ವರ್ಷ ಸಾಗಿತು. ಆಗ ಒಂದು ದಿನ ಇದ್ದಕ್ಕಿದ್ದಂತೆ ಮಿಲರೇಪನಿಗೆ ತನ್ನ ಗುಹಾವಾಸದಿಂದ ಹೊರಗಹೋಗಿ ಸುತ್ತಾಡಿಕೊಂಡು ಬರುವ ಮನಸ್ಸಾಯಿತು. ಒಡನೆಯೇ ತನ್ನ ಮನಸ್ಸನ್ನು ಹೀಗೆ ದಂಡಿಸಿಕೊಂಡ—"ಎಲೆ,

ಕಪಿಯಂಥ ಮನಸ್ಸೆ, ಮನುಷ್ಯವರ್ಗದಿಂದ ಇಂದು ದೂರಾಗಿದ್ದೀಯೆ; ನಿನಗೆ ಹಿತವರು ಯಾರು? ನೀನು ಹೋದರೆ ಬಾ ಎಂಬರು ಯಾರು? ಏಕಾಂತದಿಂದ ಬೇಸರಪಟ್ಟು ಜನದ ನಡುವೆ ಹೋಗುವ ಹುಚ್ಚು ನಿನಗೆ ಸಲ್ಲದು. ಅದರಿಂದ ಪ್ರಯೋಜನವೂ ಇರದು. ಹೀಗೆ ಸುಖಕ್ಕಾಗಿ ಜಾರಿದರೆ ಶ್ರದ್ಧೆ ಗಾಳಿಗೆ ತೂರಿ ಹೋಗುವುದು.'' ಆ ಮೇಲೆ ಮೂರು ವರ್ಷಗಳು ಸಂದುವು. ವರ್ಷಕ್ಕೆ ಇಪ್ಪತ್ತುಪಡಿ ಜೋಳದಂತೆ ಈಗ ಇದ್ದ ಆಹಾರವೆಲ್ಲ ಮುಗಿದು ನಿರಶನವ್ರತದಲ್ಲಿದ್ದ; ದೇಹ ಕೃಶವಾಗಿ ತಲ್ಲಣಿಸಿತು. ನಿರ್ವಾಣ ಮುಟ್ಟದೆಯೇ ಸಾಯುವ ಸ್ಥಿತಿ ಬಂದಿತು. ನಿರ್ವಾಣ ಮುಖ್ಯವೇ, ನೇಮ ಮುಖ್ಯವೆ? ತುಸು ಆಹಾರ ತಿಂದು ದೇಹ ಶಾಂತವಾದಾಗ ಧ್ಯಾನ ಸುಲಭವಾಗುವುದು; ಅದರಲ್ಲಿ ದೋಷವೇನು? ಆದರೆ ಭಿಕ್ಷೆ ಬೇಡೆನೆಂದುಮಾಡಿದ ಪ್ರತಿಜ್ಞೆಯನ್ನು ಭಂಗಮಾಡಿದರೆ ಅದು ಗರ್ಹ್ಯವಲ್ಲವೆ? ಹೀಗೆ ಸಂದಿಗ್ಧತೆಯಲ್ಲಿ ಅವನ ಮನಸ್ಸು ತೂರಾಡಿತು. ಕಡೆಗೆ ಯಾರಿಂದಲೂ ಏನನ್ನೂ ಯಾಚಿಸದೆ, ಯದೃಚ್ಛಾಲಬ್ಧವಾದುದನ್ನು ಸೇವಿಸುವುದು ಯುಕ್ತವಾದ ಮಧ್ಯಮಾರ್ಗವೆಂದು ಬಗೆದು ಪ್ರಯಾಸದಿಂದ ತೂರಾಡುತ್ತಾ ಗುಹೆಯ ಹೊರಗೆ ಬಂದನು. ಸಮೀಪದಲ್ಲೇ ಕೊಳವೊಂದಿತ್ತು; ಪಕ್ಕದಲ್ಲಿ ದಂಟಿನಸೊಪ್ಪು ಹುಲುಸಾಗಿ ಬೆಳೆದಿತ್ತು. ಮಿಲರೇಪ ದಂಟಿನಸೊಪ್ಪನ್ನು ಆಯ್ದು ತಂದು ಅದರಲ್ಲಿ ಸ್ವಲ್ಪವನ್ನು ತಿಂದು ಪುನಃ ತನ್ನ ಧ್ಯಾನವನ್ನು ಮುಂದುವರೆಸಿದ. ದೇಹ ಅಸ್ಥಿಪಂಜರವಾಗಿತ್ತು; ಚರ್ಮದ ಬಣ್ಣ ಹಸುರು ತಿರುಗಿತ್ತು; ಜೀವಚ್ಛವವಾಗಿದ್ದ ಮಿಲರೇಪ.

ಹೀಗಿರಲು ಒಂದು ದಿನ ಮೃಗಯಾ ವಿಹಾರಕ್ಕಾಗಿ ಅಲೆಯುತ್ತಾ ನಿರಾಶರಾದ ಕೆಲವು ಬೇಡರು ಮಿಲರೇಪನ

ಗುಹೆಯ ಬಳಿ ಬಂದು ಅಲ್ಲಲ್ಲಿ ತಡಕಾಡಿದರು. ಒಳಗಿದ್ದ ಮಿಲರೇಪನನ್ನು ಕಂಡೊಡನೆ "ಅಯ್ಯೋ ಭೂತ! ಭೂತ!" ಎಂದು ಕಿರಿಚಿ ಓಡ ಹತ್ತಿದರು. ಆದರೆ ಮಿಲರೇಪ "ಅಯ್ಯಾ, ನಾನು ಭೂತವಲ್ಲ, ಸಾಧನೆ ಮಾಡುತ್ತಿರುವ ಸಂನ್ಯಾಸಿ" ಎಂದು ಹೇಳಿದಮೇಲೆ ತಿರುಗಿ ಬಂದು ಒಳಗೆಲ್ಲ ಓಡಾಡಿ ಏನೂ ಸಿಗದಿರಲು "ಅಯ್ಯಾ ಶ್ರಮಣಕ, ನಿನ್ನ ಸಾಮಾನೆಲ್ಲ ಎಲ್ಲಿ ಇಟ್ಟಿದ್ದೀಯೆ?" ಎಂದು ಗದರಿಸಿದರು. ಮಿಲರೇಪ "ನನ್ನಲ್ಲಿ ಏನು ಸಾಮಾನೂ ಇಲ್ಲ; ಇರುವುದು ಈ ದಂಟಿನಸೊಪ್ಪು ಮಾತ್ರ!" ಎನ್ನಲು ಅವರಲ್ಲೊಬ್ಬ—"ಬನ್ನಿರೊ, ಈ ಸಾಧು ಇಷ್ಟಕ್ಕೆ ಬಗ್ಗುವವನಲ್ಲ. ಇವನನ್ನು ಎತ್ತಿ ನಾಲ್ಕುಸಾರಿ ಕುಕ್ಕಿದರೆ ನಿಜ ತಾನೆ ಹೊರಗೆ ಬಂದೀತು!"—ಎಂದ; ಬೇಡರೆಲ್ಲ ಸೇರಿ ಮಿಲರೇಪನನ್ನು ಕುಳಿತಿದ್ದಂತೆಯೇ ಮೇಲೆತ್ತಿ ಕಳಗೆ ಕುಕ್ಕಿದರು. ಈ ಪ್ರಹಸನ ಅನೇಕ ಬಾರಿ ನಡೆಯಿತು. ಮೊದಲೇ ಕಂಗಾಲಾದ ದೇಹ ಈ ವ್ಯಾಯಾಮದಿಂದ ಜರ್ಝರಿತವಾಗಿ ಮಿಲರೇಪನಿಗೆ ಬಲು ಬಾಧೆಯಾಯಿತು. ಕಡೆಗೆ ಅವರಲ್ಲೊಬ್ಬನಿಗೆ ಕನಿಕರವುಂಟಾಗಿ—"ಅಯ್ಯಾ, ಬಿಡಿ, ಇವನ ಬಳಿ ಏನೂ ಇರಲಿಕ್ಕಿಲ್ಲ. ನೋಡಿದರೆ ನಿಜವಾದ ಸಾಧುವಿನಂತೆ ತೋರುತ್ತಾನೆ. ಅಲ್ಲದೆ ಇವನನ್ನು ಹಿಂಸಿಸಿ ನಮಗೆ ಪ್ರಯೋಜನವೇನು?"—ಎಂದು ಹೇಳಿ ಮಿಲರೇಪನ ಕಡೆ ತಿರುಗಿ—"ಅಯ್ಯಾ, ಇಷ್ಟು ಅಪಚಾರವನ್ನೂ ಸಹಿಸಿರುವುದು ಹೆಚ್ಚು. ನಾನು ಮಾಡಿದ ತಪ್ಪನ್ನು ಕ್ಷಮಿಸು; ನನಗೆ ಆಶೀರ್ವಾದ ಮಾಡು"—ಎಂದನು. ಉಳಿದವರು ಗಟ್ಟಿಯಾಗಿ ನಗುತ್ತ "ನಮಗೂ ಆಶೀರ್ವಾದ ಮಾಡಯ್ಯಾ" ಎಂದರು. ಅವರಲ್ಲೊಬ್ಬ—"ಓಹೋ, ನಿಮಗೂ ಮಾಡುತ್ತಾನೆ; ಆದರೆ ಬೇರೆಯ ರೀತಿಯಲ್ಲಿ!" ಎಂದ. ಅವರೆಲ್ಲ ನಗುತ್ತ ಹೊರಟು

ಹೋದರು. ಮಿಲರೇಪನಿಗೆ ಅಷ್ಟು ಯಾತನೆಯಾಗಿದ್ದರೂ ಅವರ ವಿಷಯದಲ್ಲಿ ಯಾವ ರೀತಿಯ ದ್ವೇಷವೂ ಉಂಟಾಗಲಿಲ್ಲ.

ಅಲ್ಲಿಂದ ಮುಂದೆ ಒಂದು ವರ್ಷ ಸಾಗಿತು. ಈ ವೇಳೆಗೆ ಮಿಲರೇಪನ ಬಳಿಯಿದ್ದ ಬಟ್ಟೆಯೆಲ್ಲ ಹರಿದು ಚಿಂದಿಚಿಂದಿಯಾಗಿತ್ತು. ಅವನ ಚಿಕ್ಕಮ್ಮ ಕೊಟ್ಟಿದ್ದ ಜೋಳದ ಚೀಲವೊಂದು ಉಳಿದಿತ್ತು. ಅದನ್ನೇ ಹಾಸಿ ಅದರ ಮೇಲೆ ಕುಳಿತು ಧ್ಯಾನಮಾಡುತ್ತಿದ್ದ; ರಾತ್ರಿ ಚಳಿಯಾದರೆ ಅದನ್ನೇ ಹೊದೆಯುತ್ತಿದ್ದ. ಹೀಗೆಯೇ ಕೆಲವು ತಿಂಗಳುಗಳು ಕಳೆಯಲು ಒಂದು ದಿನ ಮತ್ತೊಂದು ಬೇಡರ ಗುಂಪು ಅವನ ಗುಹೆಯ ಬಳಿ ಬಂದಿತು. ನಿರಾಹಾರದಿಂದ ಒಣಗಿ, ಧ್ಯಾನದಿಂದ ಕೃಶನಾಗಿ, ವಿವಿಕ್ತವಾಸದಿಂದ ಅಮಾನುಷನಾಗಿ ಕಾಣುತ್ತಿದ್ದ ಮಿಲರೇಪನನ್ನು ಕಂಡೊಡನೆ ಅವರೆಲ್ಲ 'ಭೂತ, ಭೂತ' ಎಂದು ಚೀರಿಕೊಂಡು ಚೆಲ್ಲಾಪಿಲ್ಲಿಯಾಗಿ ಓಡಿದರು. ಮಿಲರೇಪ ಹೊರಗೆ ಬಂದು ತಾನು ಭೂತವಲ್ಲ, ಅವಧೂತ ಎಂದು ವಿವರಿಸಲು ಅವರು ಹಿಂದಿರುಗಿ ಬಂದು, ಅವನ ತಪಶ್ಚರ್ಯೆಗೆ ಮಣಿದು, ತಮ್ಮೊಡನೆ ತಂದಿದ್ದ ಆಹಾರದ್ರವ್ಯಗಳಲ್ಲಿ ಸ್ವಲ್ಪಭಾಗವನ್ನು ಅವನಿಗೆ ಕೊಟ್ಟರು. ಅವರು ಹೊರಟುಹೋದ ಮೇಲೆ ಮಿಲರೇಪ ಆ ಆಹಾರ ಪದಾರ್ಥದಲ್ಲಿ ಅತಿ ಸ್ವಲ್ಪ ಭಾಗವನ್ನು ತಿಂದು ಉಳಿದಿದ್ದನ್ನು ಮುಂದಿನ ದಿನಗಳಿಗೆಂದು ಇಟ್ಟುಕೊಂಡ. ಆದರೆ ಮರುದಿನ ನೋಡುವಲ್ಲಿ ರುಚಿಯಾಗಿದ್ದ ಆ ಪದಾರ್ಥಗಳಿಗೆ ಇರುವೆಗಳು ಮುತ್ತಿದ್ದುವು. ಅವನ್ನು ಓಡಿಸಿ ತಾನು ಅನ್ನವನ್ನು ತಿನ್ನಲೇ ಎಂದು ಮಿಲರೇಪನಿಗೆನಿಸಿತು; ಆದರೆ ಮರುಕ್ಷಣ—"ಹಾಗೆ ಮಾಡಿದರೆ ಅದು ದರೋಡೆಗೆ ಸಮನಾದ ಪಾಪ, ಇರುವೆಗಳೇ ತಿನ್ನಲಿ"—ಎಂದು ಮತ್ತೆ ನಿರಶನವ್ರತವನ್ನೇ ನಡಸಿದ.

ಇದಾದ ಕೆಲವು ದಿನಗಳಮೇಲೆ ಒಂದು ರಾತ್ರಿ ಒಬ್ಬ ಕಳ್ಳ ಬಂದು ಮಿಲರೇಪನ ಗುಹೆಯ ಒಳಗೆ ತಡಕಾಡುತ್ತಿದ್ದ ; ಅದನ್ನು ಕಂಡು ಮಿಲರೇಪ ನಕ್ಕು—"ಅಯ್ಯಾ, ನನಗೆ ಹಗಲೇ ಸಿಗದುದು ನಿನಗೆ ಕತ್ತಲೆಯಲ್ಲಿ ಸಿಕ್ಕೀತು, ನೋಡು, ನೋಡು"—ಎಂದ. ಕಳ್ಳನೂ ನಕ್ಕು ಹೊರಟುಹೋದ. ಮರುದಿನ ಗುಹೆಯ ಹೊರಗೆ ಮಿಲರೇಪ ಧ್ಯಾನದಲ್ಲಿ ಕುಳಿತಿದ್ದ ; ಮೃಗಯಾ ವಿಹಾರಕ್ಕೆಂದು ಬಂದು ಬೇಟೆ ಸಿಕ್ಕದೆ ಬಳಲಿದ್ದ ಬೇಡರ ತಂಡವೊಂದು ಅಲ್ಲಿಗೆ ಬಂದಿತು. ಇವನು ಮನುಷ್ಯನೋ ಭೂತವೋ, ಬದುಕಿರುವವನೋ ಸತ್ತವನೋ ನೋಡಲು ಬೇಡರೆಲ್ಲ ತಂತಮ್ಮ ಬಿಲ್ಲುಗಳಿಂದ ಅವನನ್ನು ತಿವಿಯಲು ಮಿಲರೇಪ ಬಹಿರ್ಮುಖನಾಗಿ ಅವರ ಕುತೂಹಲವನ್ನು ಕಂಡು ನಕ್ಕ. ಅವನು ನಕ್ಕಾಗ ಹಲ್ಲುಗಳನ್ನು ನೋಡಿ—"ಅಯ್ಯಾ, ನೀನು ಮಿಲರೇಪನೇ?"—ಎಂದು ಕೇಳಿದರು. ಅವನು ಹೌದೆಂದಾಗ, "ಸರಿ, ನೀನು ಈಗ ಯೋಗಿಯಾಗಿದ್ದೀಯೆಂದು ಕೇಳಿ ಬಲ್ಲೆವು. ಇದು ನಿನ್ನ ಆಶ್ರಮಸ್ಥಾನವಿದ್ದೀತು. ನಾವಂತೂ ಬಳಲಿ ಬಂದಿದ್ದೇವೆ. ನಮಗೆ ಉಣಲು ಏನಾದರೂ ಕೊಡಲೊಲ್ಲೆಯಾ?" ಎಂದು ಕೇಳಿದರು. ಆಗ ಮಿಲರೇಪ—"ಅಯ್ಯಾ ಧರ್ಮಾತ್ಮರಿರಾ, ನೀವು ಉಣುವಂಥದು ನನ್ನ ಬಳಿ ಏನೂ ಇಲ್ಲ"—ಎಂದ. ಅದಕ್ಕೆ ಅವರು—"ನೀನು ಉಣುವುದೇ ನಾವೂ ಉಣುವೆವಯ್ಯಾ, ಏನಾದರೂ ಕೊಡು"—ಎನ್ನಲು ಮಿಲರೇಪ ತಾನು ಸಂಗ್ರಹಿಸಿದ್ದ ದಂಟಿನ ಸೊಪ್ಪನ್ನು ತಂದು ಅವರ ಮುಂದಿಟ್ಟ. ಅವರು ಅಲ್ಲಲ್ಲಿ ಎಲೆ ತರಗುಗಳನ್ನು ಆಯ್ದು ತಂದು ಬೆಂಕಿ ಹೊತ್ತಿಸಿ ಪಾತ್ರೆಯಿಟ್ಟು ಸೊಪ್ಪನ್ನು ಬೇಯಿಸಿದರು. "ಅಯ್ಯಾ, ಇದರೊಂದಿಗೆ ನಂಜಿಕೊಳ್ಳಲು ಏನಾದರೂ ಕೊಡು" ಎಂದು ಕೇಳಲು ಮಿಲರೇಪ—"ವರ್ಷಾಂತರಗಳಿಂದ ನನಗೆ ಇದೇ ಊಟ; ನಂಜಿಕೊಳ್ಳಲು

ದಂಟಿನ ಸೊಪ್ಪಿನ ಕುಡಿಗಳನ್ನು ಕೊಳ್ಳಿರಿ"—ಎಂದ. ಅದಕ್ಕೆ ಅವರು—"ಸರಿ, ಸರಿ, ಈ ಊಟ ಮಾಡಿಯೇ ನೀನು ಹೀಗಿರುವೆ! ಸೋಮಾರಿಯಾಗಿ ಹೀಗೆ ಸಾಯುವುದಕ್ಕಿಂತ ಎಲ್ಲಿಯಾದರೂ ಜೀತ ಮಾಡಿದರೆ ಅನ್ನ ದೊರೆಯುವುದಲ್ಲವೇ? ನೀನು ಮನುಷ್ಯರ ಗುಂಪಿಗೆ ಅನರ್ಹ!"—ಎಂದು ಜರಿದರು. ಅದನ್ನು ಕೇಳಿ ಮಿಲರೇಪ ನಸುನಕ್ಕು ತನ್ನ ಆಧ್ಯಾತ್ಮಿಕ ಸಂಪತ್ತನ್ನು ಅಧಿಕರಿಸಿ ಒಂದು ಹಾಡನ್ನು ಹಾಡಿದ. ಆ ಗೀತದ ವಸ್ತು ಅವರಿಗೆ ಹಿಡಿಸದಿದ್ದರೂ ಅದರ ಸಾಂಗತ್ಯ ಚೆನ್ನಾಗಿದ್ದು ಅದನ್ನು ಅವರು ಬಾಯಿಪಾಠ ಮಾಡಿಕೊಂಡು ಹೊರಟುಹೋದರು.

ಇದಾದ ಕೆಲ ದಿನಗಳ ನಂತರ ಆ ಊರಿನ ಜಾತ್ರೆಯೊಂದರಲ್ಲಿ ಈ ಬೇಡರು ತಾವು ಮಿಲರೇಪನಿಂದ ಕಲಿತಿದ್ದ ಗೀತವನ್ನು ಹಾಡುತ್ತಿದ್ದರು. ಜನರ ಗುಂಪಿನಲ್ಲಿ ಭಿಕ್ಷುಕಿಯಾಗಿದ್ದ ಮಿಲರೇಪನ ತಂಗಿ ಪೇತಳೂ ಇದ್ದಳು. ಈ ಹಾಡನ್ನು ಕೇಳಿದೊಡನೆ ಆಕೆ ಆ ಬೇಡರನ್ನು ಕುರಿತು—"ಅಯ್ಯಾ, ಈ ಗೀತವನ್ನು ಮಾಡಿದವನು ದೇವತಾಪುರುಷನೇ ಇರಬೇಕು"—ಎನ್ನಲು ಅವರು ವ್ಯಂಗ್ಯವಾಗಿ—"ಆಹಾ! ದೇವತಾಪುರುಷನೇ !! ಅವನು ದೇವತೆಯೋ ದೆವ್ವವೋ ನಮಗೆ ತಿಳಿಯದು, ಆದರೆ ಆ ಗೀತ ನಿನ್ನ ಅಣ್ಣ ಮಿಲರೇಪನದು" ಎಂದರು. ಪೇತಳಾದರೋ ತನ್ನ ದುಃಖಸ್ಥಿತಿಯನ್ನು ಕಂಡು ಪರಿಹಾಸ್ಯ ಮಾಡುತ್ತಿದ್ದಾರೆಂದು ಬಗೆದು ಅಳಲು ಮೊದಲಿಟ್ಟಳು. ಆಗ ಅದೇ ಗುಂಪಿನಲ್ಲಿದ್ದ ಜೆಸಾಯಳು ಬಂದು—"ತಂಗಿ, ನಿನ್ನ ಅಣ್ಣ ಬಹುಶಃ ಇನ್ನೂ ಜೀವಂತನಾಗಿದ್ದಾನೆ; ಇವರನ್ನು ಕೇಳಿ ಅವನಿರುವ ಸ್ಥಳವನ್ನು ಅರಿತು ಅಲ್ಲಿಗೆ ಹೋಗೋಣ, ಏಳು!"—ಎಂದು ಸಂತೈಸಿದಳು. ನಂತರ ಆ ಬೇಡರಿಂದ ಮಿಲರೇಪನ ವಾಸಸ್ಥಾನದ

ವಿವರವನ್ನು ಅರಿತು, ಒಂದು ಹೂಜಿಯಲ್ಲಿ ಛಾಂಗ್ ಮದ್ಯ ಮತ್ತು ಸ್ವಲ್ಪ ಭಕ್ಷ್ಯಗಳನ್ನು ಒಯ್ದು, ಆ ಗುಹೆಯ ಬಳಿ ಹೋದರು.

ಜೀವಚ್ಛವವಾಗಿದ್ದ ಮಿಲರೇಪನನ್ನು ಕಂಡೊಡನೆ ಅವನ ತಂಗಿ ಚೀರಿ ಸಂಜ್ಞೆ ತಪ್ಪಿ ಬಿದ್ದುಬಿಟ್ಟಳು. ಜೆಸಾಯಳ ಉಪಚಾರದಿಂದ ಎಚ್ಚರ ಬಂದಾಗ "ಇದೇನು ಭೂತವೋ, ಮನುಷ್ಯನೋ?" ಎಂದು ಶಂಕಾತುರಳಾಗಿ ಕೇಳಿದಳು. ಮಿಲರೇಪ ನಕ್ಕು "ತಂಗಿ, ಕರುಳನ್ನರಿಯೆಯಾ? ನಾನು ಮಿಲರೇಪನಲ್ಲವೆ? ಸತತವಾದ ಯೋಗಾಭ್ಯಾಸದಿಂದ ಹೀಗೆ ಕೃಶನಾಗಿದ್ದೇನೆ" ಎಂದ. ಅವನ ಧ್ವನಿಯನ್ನು ಕೇಳಿದೊಡನೆ ಪೇತಳು "ಅಣ್ಣಾ! ಅಣ್ಣಾ!" ಎಂದು ಕೂಗಿ ಮತ್ತೆ ಸಂಜ್ಞೆ ತಪ್ಪಿದಳು. ಸಂತೋಷ-ದುಃಖಗಳ ಬಿರುಗಾಳಿಗಳು ಮಸೆಯು ತ್ತಿದ್ದುವು. ಸಿದ್ಧಿಯ ಪಥದಲ್ಲಿದ್ದ ಮಿಲರೇಪನೂ ಅಳಲು ಮೊದ ಲಿಟ್ಟನು. ತಂಗಿ ಎಚ್ಚರ ತಿಳಿದೆದ್ದಾಗ—"ಅಣ್ಣಾ, ನಿನ್ನನ್ನು ನೋಡುವ ಹಂಬಲದಲ್ಲೇ ಅಮ್ಮ ಸತ್ತಳು. ಒಬ್ಬರೂ ಬಳಿ ಸುಳಿಯಲಿಲ್ಲ. ಅನಾಥೆಯಾದ ನಾನೇನು ಮಾಡಲಿ? ಹೆಣಕ್ಕೆ ಸಂಸ್ಕಾರ ಮಾಡಲೂ ಆಗಲಿಲ್ಲ. ಹೆದರಿ ನಾನು ಓಡಿಬಿಟ್ಟೆ. ನೀನೂ ಸತ್ತಿರುವೆಯೆಂದೇ ತಿಳಿದಿದ್ದೆ; ಅಯ್ಯೋ, ನೀನಿರುವುದು ನೋಡು! ನಮ್ಮ ವಿಧಿಯ ಕ್ರೌರ್ಯ! ನಮಗಿಂತ ಆರ್ತರು ಬುವಿಯಲ್ಲುಂಟೆ?" ಎಂದು ಹೇಳಿ ಗಟ್ಟಿಯಾಗಿ ಅಳಹತ್ತಿದಳು. ಮಿಲರೇಪನಲ್ಲೂ ದುಃಖದ ಉದ್ವೇಗ ಉಬ್ಬಿ ಕಣ್ಣುಗಳಿಂದ ಪಳಪಳನೆ ನೀರು ಮಿಡಿಯಿತು.

ಅನಂತರ ಮಿಲರೇಪ ತನ್ನ ಸಂಕಲ್ಪ ಸಾಧನೆಗಳ ವಿಚಾರವನ್ನು ತಂಗಿಗೆ ಹೇಳಲು ಆಕೆ—"ಅದೆಲ್ಲ ನಾನು ನಂಬುವುದಿಲ್ಲ. ಉಳಿದ ಯೋಗಿಗಳನ್ನು ನೋಡು, ಉಂಡು ತಿಂದು ಹೇಗಿರು

ತ್ತಾರೆ? ನಿನ್ನಂಥವನನ್ನು ನಾನು ಕಂಡುದೇ ಇಲ್ಲ"—ಎಂದು ಹೇಳಿ, ತಾನು ತಂದಿದ್ದ ಭಾಂಗ್ ಮದ್ಯವನ್ನು ಕುಡಿಯಲು ಕೊಟ್ಟಳು. ಒಂದೆರಡು ಗಂಟೆಗಳು ಅಲ್ಲಿದ್ದು ಹೆಂಗಸರಿಬ್ಬರೂ ಊರಿಗೆ ಮರಳಿದರು.

ಆ ರಾತ್ರಿ ಮಿಲರೇಪನಿಗೆ ದೇಹಾಯಾಸವಾಗಿ ಶರೀರದ ಕುಹರಗಳಿಂದ ನೋವಿನ ಸಂತತಿಯೇ ಎದ್ದು, ಸದ್ಭಾವನೆಗಳೂ ದುರ್ಭಾವನೆಗಳೂ ಮನಸ್ಸನ್ನು ಮುತ್ತಿ, ಏಕಾಗ್ರತೆಯಿಂದ ಧ್ಯಾನ ಮಾಡಲು ಅಸಾಧ್ಯವಾಯಿತು. ಇದಾದ ಕೆಲ ದಿನಗಳ ಮೇಲೆ ಮರುಬಾರಿ ಜೆಸಾಯಳೂ ಪೇತಳೂ ಬಂದರು. ಅವರು ಬಂದಾಗ ಮಿಲರೇಪ ಬರಿ ಬತ್ತಲೆಯಿದ್ದ; ಅದನ್ನು ಕಂಡು ಅವರಿಬ್ಬರೂ ನಾಚಿದರಾದರೂ ಅವನ ದುಃಸ್ಥಿತಿಗೆ ಬೆಚ್ಚಿದರು. ಅವರು ತಂದ ಪಾನೀಯವನ್ನು ಮಿಲರೇಪ ಕುಡಿಯುತ್ತಿದ್ದಾಗ ಪೇತಳು—"ಅಣ್ಣಾ, ನಿನ್ನನ್ನು ಯಾವ ಕಡೆಯಿಂದ ನೋಡಿದರೂ ಇಷ್ಟಾದರೂ ಮನುಷ್ಯನಂತೆ ಕಾಣುವುದೇ ಇಲ್ಲ! ನನ್ನಲ್ಲಿ ದಯೆಯಿಟ್ಟಾದರೂ ಇನ್ನು ಮುಂದೆ ಊರಿಗೆ ಬಂದು ಭಿಕ್ಷೆ ಬೇಡಿ ಸಾಮಾನ್ಯ ಯೋಗಿಗಳಂತೆ ವಾಸಿಸು. ನಿನಗೆ ಎಲ್ಲಿಯಾದರೂ ಸ್ವಲ್ಪ ಬಟ್ಟೆ ತಂದು ಕೊಡುತ್ತೇನೆ"—ಎಂದಳು. ಮಿಲರೇಪ ನಕ್ಕು—"ತಂಗಿ, ನೀನು ಎಣಿಸುವ ಕಷ್ಟಗಳೊಂದೂ ನನಗೆ ಅಂಟಿಲ್ಲ. ನನಗೆ ಮನೆಯಿಲ್ಲ; ಕಾಡು ಪ್ರಾಣಿಯಂತೆ ಇದ್ದೇನೆ! ನನ್ನ ಊಟ ನಾಯಿ-ಹಂದಿಗಳಂತೆಯೇ; ನೋಡಿದವರಿಗೆ ಅಸಹ್ಯವಾದೀತು! ನನ್ನ ದೇಹವೋ ಅಸ್ಥಿಪಂಜರ; ನನ್ನ ಪರಮ ಶತ್ರುವೂ ನನ್ನನ್ನು ಕಂಡು 'ಅಯ್ಯೋ ಪಾಪ' ಎಂದಾನು! ಇಷ್ಟಾದರೂ ನನ್ನ ಮನಸ್ಸು ಮುಕ್ತವಾಗಿದೆ. ನನ್ನ ಧ್ಯಾನದಿಂದಾಗಿ ಜೀವನದ ಭಾರ ಇಳಿದಿದೆ. ಈ ಕೊರೆಯುವ ಬಂಡೆಯಮೇಲೆ ಬರಿ ಮೈಯಲ್ಲಿ ಕುಳಿತು ನಿಷ್ಠೆಯಿಂದ ನನ್ನ

ಗುರುವಿನ ಆದೇಶವನ್ನು ಮನನ ಮಾಡುತ್ತಿದ್ದರೆ ಜಗತ್ತಿನ ಹಂಗೇ ನನಗೆ ಬೇಕದು. ನನ್ನ ಸುಖ ನನ್ನ ಬಂಧುಗಳಿಗೆ ಅರ್ಥವಾಗದು; ನನ್ನ ದುಃಖ ನನ್ನ ಶತ್ರುಗಳಿಗೆ ತಿಳಿಯದು. ಹೀಗೆಯೇ ಈ ಏಕಾಂತದಲ್ಲೇ ದೇಹದ ಭಾರವನ್ನು ಇಳಿಸುತ್ತೇನೆ. ಅದುವೆ ನನಗೆ ಹಿತ. ನನ್ನ ನೋವು ಯಾರಿಗೂ ತಿಳಿಯುವುದು ಬೇಡ; ನನ್ನ ಹೆಣ ಪಕ್ಷಿಗಳಿಗೆ, ಹುಳುಗಳಿಗೆ ಆಹಾರವಾಗಲಿ. ನಾನು ಎಲ್ಲಿಗೆ ಸಾಗಿದೆನೆಂಬ ಚಿಂತೆ ಯಾರಿಗೂ ಬೇಡ; ನನ್ನ ಶವದ ಸುತ್ತ ಅಳುವ ಮಂದಿ ನೆರೆಯುವುದು ಬೇಡ. ನನಗೆ ಯಾರೊಬ್ಬರ ಹಂಗೂ ಬೇಡ, ಗೊಡವೆಯೂ ಬೇಡ. ನಾನು ಮಾಡಿದ ಕರ್ಮಗಳಿಗೆ ನಾನೇ ಫಲವುಂಡು ನನ್ನ ಇಹದ ಋಣವನ್ನು ತೀರಿಸಿಕೊಳ್ಳುವೆ''—ಎಂದ. ಅದಕ್ಕೆ ಜೆಸಾಯಳು—''ನೀನು ನಿಜವಾಗಿ ಲೋಕೋತ್ತರನಾದ ಮನುಷ್ಯ. ಆದರೆ ಹೀಗೆ ಅನ್ನ ಬಟ್ಟೆಯಿಲ್ಲದೆ ನೀನಿರುವೆಯೆಂದರೆ ನಮ್ಮ ಮನಸ್ಸಿಗೆ ಬಲು ಸಂಕಟ. ಒಂದು ಅರಿವೆಯಿಂದ ಮೈ ಮುಚ್ಚಿಕೊಂಡರೆ ನಿನ್ನ ಧ್ಯಾನ ಓಡಿ ಹೋಗುವುದೇನು? ದಯೆಮಾಡಿ ಈ ಉಪಹಾರ ವನ್ನು ಸ್ವೀಕರಿಸು. ಎಲ್ಲಿಂದಲಾದರೂ ಸ್ವಲ್ಪ ಬಟ್ಟೆ ತಂದು ಕೊಡುತ್ತೇನೆ''—ಎಂದು ಹೇಳಿ ಪೇತಳನ್ನೂ ಕರೆದುಕೊಂಡು ಹೊರಟುಹೋದಳು.

ಅವರು ತಂದಿದ್ದ ಉಪಹಾರವನ್ನು ಉಂಡೊಡನೆ ಮಿಲ ರೇಪನ ದೇಹದ ಆದ್ಯಂತ ಉರಿ ಆರಂಭವಾಯಿತು. ಅವಸಾನ ಸಮಾಪಿಸಿತೋ ಎನ್ನುವಷ್ಟು ಸಂಕಟ ಶುರುವಾಯಿತು. ಮನಸ್ಸು ಬಿರುಗಾಳಿಯಲ್ಲಿ ತೂರಾಡಿತು. ಮಿಲರೇಪ ದಿಕ್ಕು ತೋರದೆ ಕಂಗಾಲಾದ: ಸಿದ್ಧಿ ಮುಟ್ಟದೆಯೇ ಸಾವು ಬಂದಿತಲ್ಲಾ ಎಂಬ ಚಿಂತೆ ಬಲವಾಗಿ ಬಾಧಿಸಿತು. ಆಗ ಒಡನೆಯೇ ತನಗೆ ಗುರು ಆಪತ್ಕಾಲದಲ್ಲಿ ಬಿಚ್ಚಿ ನೋಡೆಂದು ಹೇಳಿಕೊಟ್ಟಿದ್ದ

ಪತ್ರದ ಸುರುಳಿ ನೆನಪಿಗೆ ಬಂದಿತು. ಇದಕ್ಕಿಂತ ವಿಪತ್ತಿನ ಸಮಯ ಬೇರೆ ಇಲ್ಲವೆಂದು ಬಗೆದು ಮಿಲರೇಪ ಅದನ್ನು ಹೊರಕ್ಕೆ ತೆಗೆದು ನೋಡಿದ. ಅದರಲ್ಲಿ ತತ್ಕಾಲದ ವ್ಯಾಧಿಯನ್ನು ನಿರೋಧಿಸುವ ಬಗೆ ಬರೆದಿತ್ತು. ಸತತ ಯೋಗಾಭ್ಯಾಸದಿಂದ ದೇಹ ಬಳಲಿ ನರಗಳು ಒಂದು ರೀತಿಯ ಪರಿವರ್ತನೆಯಲ್ಲಿದ್ದುವು; ಸರಿಯಾದ ಆಹಾರ ಇಲ್ಲದೆ ಪರಿವರ್ತನೆಗೆ ಆತಂಕ ಬಂದಿತ್ತು. ಈಗ ಪೇತಳು ತಂದುಕೊಟ್ಟ ಆಹಾರ ತಿಂದುದರಿಂದ ನರಗಳು ಉದ್ವಿಗ್ನವಾಗಿ ಬಿಟ್ಟವು. ಹೀಗಾಗಿ ದೈಹಿಕ ಹಾಗು ಮಾನಸಿಕ ಅಸ್ವಾಸ್ಥ್ಯ ಹುಟ್ಟಿತು. ಇದನ್ನು ನಿವಾರಿಸುವ ಕ್ರಮ ಆ ಪತ್ರದಲ್ಲಿತ್ತು.

ಮಿಲರೇಪ ಅದನ್ನೋದಿ ಅದರಂತೆ ನಡೆಸಿ ಮತ್ತೆ ಯೋಗಾಭ್ಯಾಸಕ್ಕೆ ಕುಳಿತ. ದೇಹದಲ್ಲಿ ಸ್ವಾಸ್ಥ್ಯ ತೋರಿತು; ಮನಸ್ಸಿನಲ್ಲಿ ಶಾಂತಿ ಬಂದಿತು; ಸುಷುಮ್ನಾ ಮುಂತಾದ ನಾಡಿಗಳೆಲ್ಲ ಸಡಿಲಿಸಿದವು. ಇಲ್ಲಿಯವರೆಗೆ ಅಜ್ಞಾತವಾಗಿದ್ದ ಪರಾಜ್ಞಾನ ಅಂಕುರಿಸಿತು. ಸಂಸಾರದ ಬಂಧಗಳೆಲ್ಲ ಕಳಚಿಬಿದ್ದಂತೆ ಭಾಸವಾಯಿತು. ನಿರ್ವಾಣದ ಸ್ವರೂಪ ಅರ್ಥವಾಯಿತು. ಇಷ್ಟು ಕಾಲ ವಿಶೇಷವಾದ ಕಷ್ಟ-ನಿಷ್ಠುರಗಳನ್ನು ಅನುಭವಿಸಿ ನಡಸಿದ ಸಾಧನೆ ಇದೀಗ ಸಿದ್ಧಿಯನ್ನು ಮುಟ್ಟಿತು. ಮಿಲರೇಪನಿಗೆ—ದೇಹವನ್ನು ಸರಿಯಾಗಿ ನೋಡಿಕೊಳ್ಳಬೇಕು; ಯುಕ್ತವಾದ ಆಹಾರವಿಹಾರವಿಲ್ಲದೆ ಪರಾಜ್ಞಾನದ ಅರಿವಾಗದು—ಎಂಬ ಮಂತ್ರಯಾನದ ಅಭಿಮತದಲ್ಲಿ ಶ್ರದ್ಧೆ ಉಂಟಾಯಿತು. ಅಲ್ಲದೆ ಅವನ ಸಿದ್ಧಿಗೆ ತನ್ನ ತಂಗಿ ಪೇತಳೂ, ಅವಳ ಗೆಳತಿ ಜೆಸಾಯಳೂ ಸಹಾಯಕರೆಂದು ಅವರಲ್ಲಿ ಭಕ್ತಿ ಹುಟ್ಟಿತು. ಆಗ ಮಿಲರೇಪ ತನ್ನ ಗುರುವಿಗೆ ಅಭಿನಂದನಾರೂಪವಾದ ಗೀತೆಯೊಂದನ್ನು ಹಾಡಿದ.

ಮಂತ್ರಸಿದ್ಧಿಯಿಂದ ಅವನಿಗೆ ಆಕಾಶದಲ್ಲಿ ಹಾರಾಡುವ ಶಕ್ತಿ, ಬೇಕೆಂದ ರೂಪ ಧರಿಸಿ ಜನಗಳನ್ನು ವಶಮಾಡಿಕೊಳ್ಳುವ ಶಕ್ತಿ ಬಂದವು. ಈ ಶಕ್ತಿಗಳನ್ನು ಉಪಯೋಗಿಸಿ ಬಹು ಜನರ ಹಿತ ಸುಖ ಕಲ್ಯಾಣಗಳಿಗಾಗಿ ಶ್ರಮಿಸಲೇ ಎಂದು ಮಿಲರೇಪ ನಿಗೆ ಎನಿಸಿತು. ಆದರೆ ತನ್ನ ಗುರು ಹೇಳಿದ್ದನಲ್ಲವೆ—ನಿನ್ನ ಇಡೀ ಜೀವನವನ್ನೆಲ್ಲ ಧ್ಯಾನದಲ್ಲೇ ವಿನಿಯೋಗಿಸಬೇಕು—ಎಂದು? ಜನರ ಹಿತಕ್ಕೆಂದು ಹೊರಟರೆ ಏಕಾಂತ ಭಂಗವಾಗುವುದು; ಏಕಾಂತವಿಲ್ಲದೆ ಧ್ಯಾನವೆಲ್ಲಿ ಬಂತು? ಗುರುವಿನ ಅನುಜ್ಞೆಯನ್ನು ಹೇಗೂ ಮನ್ನಿಸಬೇಕು. ಹೀಗೆ ನಿರ್ಧರಿಸಿ ತನ್ನ ಧ್ಯಾನವನ್ನು ಮುಂದುವರೆಸಲು ಲಪ್ಚಿ-ಛೂಬಾರ್ ಸಂಗಮಸ್ಥಾನಕ್ಕೆಂದು, ದಂಟಿನ ಸೊಪ್ಪನ್ನು ಬೇಯಿಸುತ್ತಿದ್ದ ಮಡಕೆಯನ್ನು ಹೆಗಲ ಮೇಲೆ ಹೊತ್ತು ಹೊರಟ. ದೀರ್ಘ ತಪಸ್ಸಿನಿಂದ ಬಹುಶ್ರಾಂತ ವಾದ ದೇಹ ಎರಡು ಹೆಜ್ಜೆ ಇಡುವುದರಲ್ಲೇ ಆಯ ತಪ್ಪಿತು; ಹೆಗಲಮೇಲಿದ್ದ ಮಡಕೆ ಕೆಳಗೆ ಬಿದ್ದು ಒಡೆದು ಪುಡಿಪುಡಿ ಯಾಯಿತು. ಆದರೆ ಅದರ ಒಳಗೆ ಹಿಂದೆ ಬೇಯಿಸಿ ಈಗ ಗಟ್ಟಿ ಯಾಗಿಬಿಟ್ಟಿದ್ದ ದಂಟಿನಸೊಪ್ಪಿನ ಖಾದ್ಯ ಮಡಕೆಯ ಆಕಾರ ವನ್ನೇ ಪಡೆದಿತ್ತು. ಇದನ್ನು ನೋಡಿ ಮಿಲರೇಪನಿಗೆ—"ಎಲಾ, ಎಲ್ಲ ಜೀವಿಗಳ ಸ್ಥಿತಿಯೂ ಹೀಗೆ ತಾನೇ? ಜಗತ್ತಿನ ಕ್ಷಣ ಭಂಗುರ ಸ್ಥಿತಿಯ ಅರಿವು ಇಂದಾಯಿತು. ನನ್ನ ಏಕಮಾತ್ರ ಸ್ವತ್ತಾಗಿದ್ದ ಈ ಮಡಕೆ ಈಗ ಒಡೆದು ನನಗೆ ಗುರುವಾಗಿ ಪರಿಣಮಿಸಿತು!"—ಎಂದು ಅನಿಸಿತು.

---

# ಲೋಕ ಕಲ್ಯಾಣ

ತನಗೊದಗಿದ ಜ್ಞಾನೋದಯದ ಆನಂದದಲ್ಲಿ ಮಿಲರೇಪ ಮೈಮರೆತಿದ್ದಾಗ ಅಲ್ಲಿಗೆ ಬೇಡರ ಗುಂಪೊಂದು ಬಂದಿತು. ಅಸ್ಥಿ ಪಂಜರದಂತೆ ಕೃಶವಾಗಿ, ಹಚ್ಚ ಹಸುರು ಮೈಯಾಗಿ, ಭೂತದಂತೆ ಓಡಾಡುತ್ತಿದ್ದ ಅವನನ್ನು ಕಂಡು ಅವರಿಗೆ ವಿಚಿತ್ರವೆನಿಸಿ—"ಅಯ್ಯಾ, ನೀನಾರು ? ಹೀಗೇಕೆ ಇರುವಿ ? ಈ ಒಡೆದ ಮಡಕೆಯೇನು ? ತುಂಬ ಸಂತೋಷದಲ್ಲಿ ಬೇರೆ ಇರುವಿ ?"—ಎಂದು ಕೇಳಿದರು. ಮಿಲರೇಪ ತನ್ನ ವೃತ್ತಾಂತವನ್ನೆಲ್ಲ ಹೇಳಿದಾಗ ಅವರು ನಕ್ಕು—"ನಿನ್ನಂಥ ತಿಳಿಗೇಡಿಯನ್ನೇ ಕಾಣೆವು ? ಯೋಗಾಭ್ಯಾಸವಂತೆ, ತಪಸ್ಸಂತೆ ? ಸೋಮಾರಿತನಕ್ಕೊಂದು ನೆಪ ! ನಾವು ಹೇಳುವುದು ಕೇಳು, ಎಲ್ಲಿಯಾದರೂ ಭೂಮಿ ಯುತ್ತೋ, ವ್ಯಾಪಾರ ಮಾಡಿಯೋ, ಊಳಿಗ ಮಾಡಿಯೋ ಸಾಮಾನ್ಯ ಮನುಷ್ಯರಂತೆ ಬಾಳ್ವೆ ನಡೆಸು. ಅದೀಗ ಮನುಷ್ಯನಿಗೆ ಚೆನ್ನು. ಉಂಡು ತಿಂದು ಸುಖವಾಗಿರದೆ ಈ ನಿರರ್ಥಕವಾದ ಶೋಷಣೆ ಏಕೆ ?"—ಎನ್ನಲು ಮಿಲರೇಪ—"ಅಯ್ಯಾ ಧರ್ಮಾತ್ಮರೇ, ನನ್ನನ್ನು ನೋಡಿ ಮರುಕಪಡುತ್ತಿದ್ದೀರಿ. ಆದರೆ ಅದಕ್ಕೆ ಕಾರಣವನ್ನೇ ನಾನರಿಯೆ. ಜಗತ್ತಿನಲ್ಲಿ ಸುಖಿಯೆಂದರೆ ನಾನು. ಒಂದರ ಗೊಡವೆಯಿಲ್ಲ, ಒಬ್ಬರ ಹಂಗಿಲ್ಲ, ಅದು ಬೇಕು ಇದು ಬೇಕೆಂಬ ಚಪಲ ಇಲ್ಲ, ಕಾರ್ಪಣ್ಯ ಇಲ್ಲ, ಸ್ಥೈರ್ಯ ಇಲ್ಲ, ಭಯ ಇಲ್ಲ, ಆಸೆ ಇಲ್ಲ. ಪ್ರಪಂಚದಲ್ಲಿ ತೊಳಲುತ್ತಿರುವ ನಿಮ್ಮನ್ನು ನೋಡಿ ನಾನು ಅಯ್ಯೋ ಎನ್ನುತ್ತೇನೆ !" ಎಂದು ಹೇಳಿ ಒಂದು ಹಾಡು ಹಾಡಿದ. ಅದರ ಅರ್ಥ :—

"ನನ್ನ ದೇಹವೆಂಬ ಬೋಧಿ ಪರ್ವತದಲ್ಲಿ, ಹೃದಯವೆಂಬ

ಯಜ್ಞವಾಟಿಕೆಯಲ್ಲಿ ಮನಸ್ಸೆಂಬ ಕುದುರೆ, ಗಾಳಿಯಂತೆ ಸುಳಿದಾಡುತ್ತಿದೆ. ಅದನ್ನು ಹಿಡಿಯುವ ಬಗೆ ಎಂತು? ಕಟ್ಟುವುದು ಹೇಗೆ? ಅದು ಹಸಿದರೆ ಆಹಾರ ಏನು? ಅದು ಕುಡಿಯುವುದು ಏನನ್ನು ? ಅದನ್ನು ಕೂಡುವ ಅಂಗಳ ಎಲ್ಲಿ ?

"ಏಕಾಗ್ರತೆಯೆಂಬ ಹಗ್ಗದಿಂದ ಈ ಕುದುರೆಯನ್ನು ಹಿಡಿದು ಧ್ಯಾನವೆಂಬ ಕಂಬಕ್ಕೆ ಕಟ್ಟಬೇಕು. ಅದು ಹಸಿದರೆ ಗುರು ಪ್ರವಚನವೆಂಬ ಹಿಂಡಿಯನ್ನು ಉಣಗೊಡಬೇಕು; ಬಾಯಾರಿದರೆ ಚೈತನ್ಯ ಧಾರೆಯನ್ನು ಕುಡಿಸಬೇಕು. ಅದು ತಂಗಲು ಶೂನ್ಯವೆಂಬ ಅಂಗಳ ಇದೆ. ಸಂಕಲ್ಪ ಅದರ ಜೀನು, ಬುದ್ಧಿಯೆಂಬುದು ಕಡಿವಾಣ, ಪ್ರಾಣಗಳು ಮೂಗುದಾರ.

"ಅದನ್ನು ಏರಿರುವ ಸವಾರ ಸ್ಮೃತಿಯೆಂಬ ತರುಣ. ಅವನು ಧರಿಸಿರುವ ಶಿರಸ್ತ್ರಾಣ ಮಹಾಯಾನಿಕ ದೃಷ್ಟಿ, ಅವನ ಕವಚ ಅಧ್ಯಯನ–ಅನುಸಂಧಾನಗಳು, ಅವನ ಬೆನ್ನಮೇಲೆ ಕ್ಷಾಂತಿ (ತಾಳ್ಮೆ) ಯೆಂಬ ಗುರಾಣಿ. ಅವನು ಕೈಯಲ್ಲಿ ಮುಮುಕ್ಷುತ್ವವೆಂಬ ಭರ್ಜಿ ಹಿಡಿದಿದ್ದಾನೆ, ಸೊಂಟದಿಂದ ಪ್ರಜ್ಞೆಯೆಂಬ ಕತ್ತಿ ಇಳಿಬಿದ್ದಿದೆ.

"ಈಗ ಅವನು ಕೈಯಲ್ಲಿ ಪರಮಾರ್ಥ ದೃಷ್ಟಿಯೆಂಬ ಬಿಲ್ಲನ್ನು ಹಿಡಿದು, ಮನಸಿಕಾರವೆಂಬ ಬಾಣವನ್ನು ಏರಿಸಿ, ಶೀಲವೆಂಬ ನಾರಾಚವನ್ನು ಸಂಕಲ್ಪವೆನ್ನುವಷ್ಟು ದೂರ ಎಳೆದು ಬಿಡುತ್ತಾನೆ. ಹೀಗೆ ಬಿಟ್ಟ ಬಾಣ ಶ್ರದ್ಧಾವಂತನನ್ನು ಮುಟ್ಟುತ್ತದೆ; ಅವನ ದೇಹವನ್ನು ಹೊಕ್ಕು ಅಲ್ಲಿ ಪಾಪಪುರುಷನನ್ನು ಕೊಲ್ಲುತ್ತದೆ.

"ಈ ಕುದುರೆ ಓಡುವ ಭೂಮಿ ಸುಖವತಿಯೆಂಬುದು. ಜನರ ಹಿತ ಅದರ ಗುರಿ. ಅದರ ಹಿಂದೆ ಇರುವ ಪ್ರದೇಶ ಸಂಸಾರವೆಂಬುದು; ಅದರ ಮುಂದಿರುವ ಪ್ರದೇಶ ಮೋಕ್ಷವೆಂಬುದು.

"ನಾನು ಈ ಕುದುರೆಯೋಟದಲ್ಲಿ ಮಗ್ನನಾಗಿದ್ದೇನೆ.

ಧರ್ಮಾತ್ಮರಿರಾ, ನನ್ನ ಸುಖ ದೊಡ್ಡದೋ, ನಿಮ್ಮ ಸುಖ ದೊಡ್ಡದೋ ?"

ಪಾಪ, ಆ ಬೇಡರಿಗೆ ಅರ್ಥವಾಗದಿದ್ದರೂ ಇವನಾರೋ ಮಹಾತ್ಮನೆಂದು ನಿರ್ಧರಿಸಿ ಅವನಿಗೆ ಅಭಿವಾದನೆ ಮಾಡಿ ಹೊರಟು ಹೋದರು.

ಅಲ್ಲಿಂದ ಮಿಲರೇಪ ಬ್ರಿನ್ ಎಂಬಲ್ಲಿಗೆ ಹೋಗಿ ಅಲ್ಲಿ ತುಸು ದಿನ ತಂಗಿದ. ಅವನ ಮಾಹಾತ್ಮ್ಯ ಅಲ್ಲಿ ಪಸರಿಸಿ ಅವನ ದರ್ಶನಕ್ಕೆಂದು ಜನಗಳು ಗುಂಪು ಗುಂಪಾಗಿ ಬರತೊಡಗಿದರು. ಬೇಕಿದ್ದರೆ ಮಿಲರೇಪ ಅಲ್ಲಿಯೇ ಹಿರಿಯ ಲಾಮನಾಗಿ ನೆಲಸಿ ಶ್ರೀಮಂತನಾಗಿ ಸರ್ವ ಸನ್ಮಾನಿತನಾಗಿರಬಹುದಾಗಿತ್ತು. ಆದರೆ ಹೀಗೆ ಅವನ ಧ್ಯಾನಕ್ಕೆ ಅಡ್ಡಿ ಬಂದುದು ಅವನಿಗೆ ಹಿಡಿಸದೆ ಅಲ್ಲಿಂದ ದೂರದ ನಿರ್ಜನ ಪ್ರದೇಶವೊಂದಕ್ಕೆ ತೆರಳಿದ.

ಇತ್ತ ಪೇತಳು ಅವರಿವರು ಎಸೆದಿದ್ದ ಉಣ್ಣೆಯ ಬಟ್ಟೆಗಳನ್ನಾಯ್ದು ತನ್ನ ಅಣ್ಣನಿಗಾಗಿ ಒಂದು ಅಂಗವಸ್ತ್ರವನ್ನು ನೆಯ್ದಳು. ಅದನ್ನು ಕೊಂಡು ಅವನಿಗೆ ಕೊಡಲು ಹೊರಟವಳು ದಾರಿಯಲ್ಲಿ ಟಿಂಗ್ರಿ ಎಂಬ ಸ್ಥಳದ ಲಾಮನೊಬ್ಬನ ಸಭೆಯನ್ನು ನೋಡಿದಳು. ಉಚ್ಚಸ್ಥಾನದಮೇಲೆ ಮೆತ್ತೆಗಳು ಹಾಸಿದ್ದು, ಅದರಮೇಲೆ ಬಣ್ಣ ಬಣ್ಣದ ಚೀಣೀ ವಸ್ತ್ರಗಳನ್ನು ಧರಿಸಿ ಲಾಮ ಬರಿ-ಲೊಟ್ಸವ ಕುಳಿತಿದ್ದ. ಅವನ ಮೇಲೆ ಶ್ವೇತಛತ್ರ; ಹತ್ತಿರದಲ್ಲಿ ಶಿಷ್ಯರು ಶಂಖ, ಕಹಳೆ, ಮುಂತಾದ ವಾದ್ಯಗಳನ್ನೂದುತ್ತ ಲಾಮನಿಗೆ ಶುಶ್ರೂಷೆಮಾಡುತ್ತ ಕುಳಿತಿದ್ದರು. ದೂರದಲ್ಲಿ ಭಕ್ತಾದಿಗಳು ವಿವಿಧ ಭಕ್ಷ್ಯಭೋಜ್ಯಗಳನ್ನು ಲಾಮನಿಗೆ ಸಮರ್ಪಿಸಲು ಸಿದ್ಧರಾಗಿ ನಿಂತಿದ್ದರು. ಇದನ್ನು ನೋಡಿ ಪೇತಳು—

"ಈ ಲಾಮನೂ ನನ್ನಣ್ಣನಂತೆಯೇ ಧರ್ಮಜೀವಿ. ಆದರೆ ನನ್ನಣ್ಣ ಶ್ಮಶಾನದ ನಾಯಂತೆ ಕಂಗಾಲಾಗಿದ್ದಾನೆ. ಅವನನ್ನು

ಹೇಗಾದರೂ ಈ ಲಾಮನ ಶಿಷ್ಯನಾಗುವಂತೆ ಒಡಂಬಡಿಸ ಬೇಕು"—ಎಂದುಕೊಂಡಳು. ನಂತರ ಮುಂದೆ ಸಾಗಿ, ದಾರಿ ಹೋಕರಿಂದ 'ಹಸುರು ಮನುಷ್ಯ' ಮಿಲರೇಪನ ಇರವನ್ನು ಅರಿತು ಅವನನ್ನು ಸಂಧಿಸಿದಳು. "ಅಣ್ಣ, ನಿನಗೆ ಮಾನ ಮರ್ಯಾದೆಯ ಚಿಂತೆಯೇ ಇಲ್ಲ. ಊರಿಂದೂರಿಗೆ ಬತ್ತಲೆ ತಿರುಗುವೆಯಲ್ಲ! ನೋಡಿದವರು ನಗರೆ? ಇಗೋ ಈ ಅಂಗವಸ್ತ್ರ ವನ್ನುಟ್ಟು ನನ್ನ ಜತೆ ಬಾ. ಟಿಂಗ್ರಿಯ ಲಾಮನ ಬಳಿ ಒಯ್ಯು ತ್ತೇನೆ; ಅವನು ದೊಡ್ಡ ಮಠದ ಮಹಂತ. ಅವನ ಬಳಿ ನೀನು ಶಿಷ್ಯನಾಗಿ ಉಳಿದರೆ ನಿನಗೆ ಅನ್ನಬಟ್ಟೆಯೆಲ್ಲ ದೊರೆತು ಪುನಃ ಮನುಷ್ಯನಾಗುವೆ!" ಎಂದಳು.

ಅದನ್ನು ಕೇಳಿ ಮಿಲರೇಪ ನಕ್ಕ—"ತಂಗಿ! ಏನಿದು ನಿನ್ನ ಚಿಂತೆ? ನಾನು ಬತ್ತಲೆಯಿರುವೆನೆಂದು ನಾಚಬೇಕೆ? ಸತ್ಯವನ್ನು ಕಂಡು ಮನುಷ್ಯಜೀವನವನ್ನು ಸಾರ್ಥಕಮಾಡಿಕೊಂಡಿರುವೆ ನಲ್ಲ; ಅದಕ್ಕಿಂತ ಮರ್ಯಾದೆ ಮತ್ತೊಂದುಂಟೆ? ನಾನು ಹುಟ್ಟಿದಾಗ ಬತ್ತಲೆಯಿರಲಿಲ್ಲವೆ? ಅದರಲ್ಲಿ ನಾಚಿಕೆಯೇನು ಬಂತು? ಅಜ್ಞರಾಗಿ, ಪಾಪಗಳನ್ನು ಮಾಡುತ್ತ, ಪರಹಿಂಸೆಯಲ್ಲಿ ನಿಂತು, ದುಃಖದಲ್ಲಿ ತೊಳಲುತ್ತಿರುವ ಮಂದಿ ಮೈಮುಚ್ಚಿಕೊಂಡ ಮಾತ್ರಕ್ಕೆ ಮಹಾತ್ಮರಾಗಿಬಿಡುವರೆ? ಅಲ್ಲದೆ ನನಗೆ ಉಣ್ಣಲು ಅನ್ನ ದೊರೆಯದೆಂದು ಯೋಗಿಯಾಗಿರುವೆನೆಂದು ತಿಳಿದೆಯಾ? ಸಂಸಾರದ ದುಃಖಗಳಿಗೆ ಅಂಜಿ ಧರ್ಮಜೀವನವನ್ನು ಅವಲಂಬಿ ಸಿರುವ ನಾನು ಅನ್ನ ಬಟ್ಟೆಗಾಗಿ ಹಂಬಲಿಸಿ ಆ ಲಾಮನ ಬಳಿ ಗುಲಾಮನಾಗಿ ಸೇರಬೇಕೆ? ನನಗೆ ಅವುಗಳಿಂದ ಆಗಬೇಕಾ ದುದು ಏನೂ ಇಲ್ಲ. ನನಗೆ ಈ ಜನ್ಮದಲ್ಲೇ ಬುದ್ಧತ್ವ ಪ್ರಾಪ್ತಿ ಯಾಗಬೇಕು; ಅದೀಗ ನನ್ನ ಬಯಕೆ. ಅದಕ್ಕಾಗಿ ಎಲ್ಲವನ್ನೂ ತ್ಯಾಗಮಾಡಿ ಏಕಾಂತದಲ್ಲಿ ಧ್ಯಾನಮಾಡುತ್ತಿದ್ದೇನೆ"—ಎಂದ.

ಪೇತಳು—“ಸರಿ, ಸರಿ! ಈ ತತ್ತ್ವವೆಲ್ಲ ಸೋಮಾರಿತನದ ಸೋಗು. ಟಿಂಗ್ರಿಯು ಲಾಮನಂತೆ ಸುಖವಾಗಿರಲು ನಿನಗೆ ಬರದು; ಏನೇನೋ ಮಾರುದ್ದ ಮಾತಾಡುವೆ! ತ್ಯಾಗಮಾಡಲು ನಮಗೆ ಇರುವುದಾದರೂ ಏನು? ಎಲ್ಲ ನಮ್ಮ ಕರ್ಮ! ಹೋಗಲಿ, ಊರೂರು ತಿರುಗದೆ ಒಂದೆಡೆಯಾದರೂ ನಿಲ್ಲು. ನೀನೆಲ್ಲಿರುವೆಯೆಂದು ಹುಡುಕಿ ಅಂಡಲೆದು ಬರುವ ಕಷ್ಟವಾದರೂ ನನಗೆ ತಪ್ಪೀತು. ಇಲ್ಲಿಯ ಜನರಿಗೇನೋ ನಿನ್ನ ಮೇಲೆ ಭಕ್ತಿಯಿರುವಂತಿದೆ. ನೋಡುವ”—ಎಂದು ಹೇಳಿ ತಾನು ತಂದಿದ್ದ ಬಟ್ಟೆಯನ್ನು ಅವನಿಗೆ ಕೊಟ್ಟುಹೋದಳು.

ಇತ್ತ ಮಿಲರೇಪ ಪೇತಳು ಕೊಟ್ಟಿದ್ದ ಒಟ್ಟೆಯನ್ನು ಹರಿದು ಆದರಲ್ಲಿ ತಲೆಯನ್ನು ಪೂರಾ ಮುಚ್ಚುವ ಟೋಪಿಯೊಂದನ್ನು ಮಾಡಿಕೊಂಡ. ನಂತರ ಒಂದೊಂದು ಬೆರಳಿಗೂ ಒಂದೊಂದು ಹೊದಿಕೆಯನ್ನು, ಕಾಲಿಗೆ ಚೀಲಗಳೆರಡನ್ನೂ, ಪುರುಷಾಂಗ ಮುಚ್ಚಲು ಚೀಲವೊಂದನ್ನೂ ಮಾಡಿಕೊಂಡ! ಕೆಲವು ದಿನ ಗಳಾದಮೇಲೆ ಅವನ ತಂಗಿ ಬಂದು—“ಅಣ್ಣಾ, ನಾನಿತ್ತ ಉಣ್ಣೆಯ ಬಟ್ಟೆಯನ್ನು ಉಪಯೋಗಿಸುತ್ತಿರುವೆಯಾ?”—ಎಂದು ಕೇಳಲು ಮಿಲರೇಪ—“ಓಹೋ, ಸ್ವಲ್ಪ ತಾಳು, ತೋರಿಸುತ್ತೇನೆ”—ಎಂದು ಹೇಳಿ ತಾನು ಮಾಡಿಕೊಂಡಿದ್ದ ವ್ಯವಧಾನಗಳನ್ನು ಧರಿಸಿ ತಂಗಿಯ ಮುಂದೆ ಬಂದು “ನೋಡಿದೆಯಾ?” ಎಂದ. ತಂಗಿ ಹೌಹಾರಿ—“ಅಣ್ಣಾ, ನೀನು ಮನುಷ್ಯನೇ ಅಲ್ಲ! ಬುದ್ಧಿ ವಿಕಲ್ಪವೆಂದರೂ ಹೀಗುಂಟೆ? ನಿನಗೆ ನಾಚಿಕೆ ಎಂಬುದರ ಅರಿವೇ ಇಲ್ಲವಲ್ಲ! ಅಲ್ಲದೆ, ಅಷ್ಟು ಕಷ್ಟ ಪಟ್ಟು ನಾನು ನೆಯ್ದ ಉಣ್ಣೆಯ ಬಟ್ಟೆಯನ್ನು ಹೀಗೆ ಹಾಳು ಮಾಡಿದೆಯಲ್ಲ!” ಎಂದು ಮೂದಲಿಸಲು ಮಿಲರೇಪ—“ತಂಗಿ, ನನಗೆ ಲಭಿಸಿರುವ ಮನುಷ್ಯಜೀವನವನ್ನು ಅತ್ಯಂತವಾಗಿ

ಸಾರ್ಥಕ ಮಾಡಿಕೊಳ್ಳುವುದರಲ್ಲೇ ನನ್ನ ಧ್ಯಾಸ. ನೀನೇನೋ ನಾಚಿಕೆಯ ಮಾತಾಡಿದೆ. ನೀನು ನೋಡಿ ನಾಚುವ ಅಂಗವನ್ನು ಕತ್ತರಿಸಿಹಾಕಲು ಸಾಧ್ಯವಿಲ್ಲ. ಅದಕ್ಕೇ ನನ್ನ ಧ್ಯಾನವನ್ನೂ ಬಿಟ್ಟು ಈ ಹೊದಿಕೆಯನ್ನು ಮಾಡಿಕೊಂಡೆ. ನಾಚಿಕೆಯ ಅಂಗ ದಂತೆಯೇ ಬೆರಳುಗಳೂ ಕಾಲೂ ತಲೆಯೂ ಇರುವುದರಿಂದ ಅವಕ್ಕೂ ಹೊದಿಕೆಗಳನ್ನು ಮಾಡಿದೆ. ನಿನಗೆ ಇನ್ನೂ ತೃಪ್ತಿ ಯಿಲ್ಲ!"—ಎಂದ. ಪೇತಳು ದಂಗುಬಡಿದವಳಂತೆ ನಿಂತಳು. ನಂತರ ಮಿಲರೇಪ,—"ತಂಗಿ, ಇದರಲ್ಲಿ ನಾಚಿಕೆಯೇನಿದೆ? ಕಳ್ಳತನ, ಸುಳ್ಳು, ಅತ್ಯಾಚಾರ, ಕ್ರೂರಕರ್ಮ ಇವು ನಾಚಿಕೆಯ ಕರ್ಮಗಳು. ಇವುಗಳಿಂದ ಜನ ನಾಚಬೇಕು, ಅವನ್ನು ಸಾಧ್ಯ ವಾದಷ್ಟು ಅಡಗಿಸಬೇಕು. ಮನುಷ್ಯನ ಜೀವವೆನ್ನುವುದೇ ಹೇಸಿಗೆಯ ಪ್ರಸಂಗ; ಅದರಲ್ಲೂ ಸಂಸಾರದ ಸಂಗ ಅತಿಯಾದರೆ ಅದರ ಅಸಹ್ಯ ಹೇಳಲಾಗದು. ಯೋಗಿಗಳಾದ ನಮಗೆ ಸಾಧಾ ರಣ ಜನರ ಕಟ್ಟಳೆಗಳ ಪರಿವೆಯಿಲ್ಲ. ನಮ್ಮ ಪದ್ಧತಿ, ಆಚಾರ, ವ್ಯವಹಾರಗಳೇ ಬೇರೆ"—ಎಂದ. ಇದೆಲ್ಲ ಪೇತಳಿಗೆ ಅರ್ಥವಾಗ ಲಿಲ್ಲ; ಅವಳು ನೀರಸವಾಗಿ—"ಸರಿ ನಿನ್ನೊಂದಿಗೆ ವಾದ ವ್ಯರ್ಥ. ಹೇಗೆ ತೋರಿದರೆ ಹಾಗೆ ಇರು. ನಿನಗೆ ಕಾಲಕಾಲಕ್ಕಷ್ಟುಆಹಾರ ಒದಗಿಸುವ ಪ್ರಯತ್ನ ಮಾಡುತ್ತೇನೆ"—ಎಂದು ಹೇಳಿಹೊರಟಳು.

ಅಷ್ಟು ಹೊತ್ತಿಗೆ ಸರಿಯಾಗಿ ದೂರದಲ್ಲಿ ಅವರ ಚಿಕ್ಕಮ್ಮ ಬರುತ್ತಿರುವುದು ಕಂಡಿತು. ಅವರ ನಡುವೆ ಸಣ್ಣ ನದಿಯೊಂದು ಹರಿಯುತ್ತಿದ್ದು ಈ ದಡದಿಂದ ಆ ದಡ ಮುಟ್ಟಲು ಮರದ ಹಲಗೆಯೊಂದನ್ನು ಹಾಕಿದ್ದರು. ಚಿಕ್ಕಮ್ಮ ಆ ದಡ ಮುಟ್ಟಿ ದಳೋ ಇಲ್ಲವೋ ಪೇತಳು ಓಡಿಹೋಗಿ ಮರದ ಸೇತುವೆಯನ್ನು ಎಳೆದುಕೊಂಡುಬಿಟ್ಟಳು. "ಈ ರಾಕ್ಷಸಿಯಿಂದಲೇ ನಮ್ಮ ಸರ್ವನಾಶವಾದದ್ದು! ಇನ್ನೇನು ಹವಣಿಸುತ್ತಿದ್ದಾಳೊ!"

ಎಂದು ಗೊಣಗುಟ್ಟಿದಳು. ಆದರೆ ಚಿಕ್ಕಮ್ಮ ಆ ದಂಡೆಯಮೇಲೆ ನಿಂತು—"ಪೇತ, ಸೇತುವೆ ತೆಗೆಯಬೇಡಮ್ಮ, ನಾನು ಬರುತ್ತಿದ್ದೇನೆ"—ಎನ್ನಲು ಪೇತಳು—"ನೀನು ಬರುತ್ತೀಯೆಂದೇ ನಾನು ಸೇತುವೆ ತೆಗೆದದ್ದು"—ಎಂದು ನುಡಿದಳು. ಆಗ ಚಿಕ್ಕಮ್ಮ—"ಅಮ್ಮಾ, ನಾನು ಮುಂಚಿನ ಪಾಪಗಳಿಗೆಲ್ಲ ಪಶ್ಚಾತ್ತಾಪ ಪಡುತ್ತಿದ್ದೇನೆ. ಮೊನ್ನೆತಾನೆ ನನ್ನಣ್ಣ ತೀರಿಕೊಂಡ. ನನಗೆ ಜೀವನದಲ್ಲೇ ಬೇಸರವಾಗಿದೆ. ಮಿಲರೇಪನಲ್ಲಿ ಕ್ಷಮೆ ಕೇಳಲು ಬಂದೆ. ಅವನಿಗಾಗಿ ಒಂದು ಯಾಕ್ ಆಕಳು ಹೊರೆಯಷ್ಟು ಪದಾರ್ಥ ತಂದೆ; ಆದರೆ ಅದನ್ನು ಇಲ್ಲಿಗೆ ತರಲು ಪ್ರಯಾಸವೆಂದು ಟ್ರಿನ್ ಹಳ್ಳಿಯಲ್ಲಿ ಬಿಟ್ಟುಬಂದಿದ್ದೇನೆ"—ಎಂದಳು. ಮಿಲರೇಪ ಆಗ ಮುಂದೆ ಬಂದು ಈ ದಂಡೆಯ ಅಂಚಿನಲ್ಲಿ ಕುಳಿತ; ಆ ಕಡೆಯಿಂದ ಚಿಕ್ಕಮ್ಮ ಅನೇಕ ಬಾರಿ ನೆಲ ಮುಟ್ಟಿ ನಮಸ್ಕಾರಮಾಡಿ ಭೇಟಿಗೆ ಅವಕಾಶ ಕೊಡುವಂತೆ ಬೇಡಿಕೊಂಡಳು. ಅವಳ ಅಭ್ಯರ್ಥನೆಗಳಲ್ಲಿ ಸ್ವಾಭಾವಿಕವಾದ ಪರಿವರ್ತನೆ ಕಾಣುತ್ತಿತ್ತು. ಆಕೆ ಹಿಂದಿನ ಅಪಚಾರಗಳನ್ನೆಲ್ಲ ಒಂದೊಂದನ್ನೂ ನಿರ್ದೇಶಿಸಿ ಮಿಲರೇಪನ ಕ್ಷಮೆ ಕೇಳಿದಳು; "ನಿನ್ನನ್ನು ನೋಡುವ ತವಕದಿಂದಲೇ ಬಂದೆ. ಕರುಣಿಸಿ ನನ್ನನ್ನು ಬರಮಾಡಿಕೋ. ಇಲ್ಲವಾದರೆ ಈ ನದಿಯಲ್ಲೇ ದುಮುಕಿ ಪ್ರಾಣ ನೀಗಿಕೊಳ್ಳುವೆ" ನೆಂದು ಆಗ್ರಹಮಾಡಿದಳು. ಯೋಗಿಯಾದ ಮಿಲರೇಪನಿಗೆ ಕ್ಷಾಂತಿ ಭೂಷಣ; ಒಡನೆಯೇ ಅವನು, ತಂಗಿ ಬೇಡ ಬೇಡೆಂದರೂ, ಮರದ ಹಲಗೆಯನ್ನು ಮತ್ತೆ ದಂಡೆಗಳಮೇಲೆ ಹಾಕಿದ. ಚಿಕ್ಕಮ್ಮ ನಡೆದು ಬಂದು ಮಿಲರೇಪನ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಅಳುತ್ತ ತನಗೆ ಧರ್ಮೋಪದೇಶ ಮಾಡೆಂದಳು. ಆಗ ಮಿಲರೇಪ ಕರ್ಮವಿಪಾಕದ ವಿಚಾರವಾಗಿ ಪ್ರವಚನಮಾಡಲು ಆಕೆಗೆ ಬೌದ್ಧಧರ್ಮದಲ್ಲಿ ಶ್ರದ್ಧೆ ಬೇರೂರಿತು;

ಮುಂದೆ ಆಕೆ ಧ್ಯಾನದಲ್ಲಿಯೇ ತನ್ನ ಬಾಳನ್ನು ಕಳೆದು ಸದ್ಗತಿ ಪಡೆದಳು.

ಅನಂತರ ಮಿಲರೇಪ ಏಕಾಂತ ಗುಹಾವಾಸದಲ್ಲಿ ನಿರಂತರ ಧ್ಯಾನಯೋಗದಲ್ಲಿ ಜೀವನ ಸವೆಸಬೇಕೆಂದು ನಿರ್ಧರಿಸಿದ. ಆದರೆ ಅವನ ಅಭಿಮಾನದೇವತೆಯಾದ ವಜ್ರಯೋಗಿನಿ ಅವನಿಗೆ ಕಾಣಿಸಿಕೊಂಡು—"ನೀನು ಜನಗಳ ನಡುವೆ ಇದ್ದು ಅವರ ಕಲ್ಯಾಣಕ್ಕಾಗಿ ಶ್ರಮಿಸು. ಮೊದಲು ಗುಂಗ್‌ಥಂಗ್ ಪ್ರದೇಶಕ್ಕೆ ಹೋಗು; ಅಲ್ಲಿ ನಿನ್ನ ಮುಂದಿನ ಪ್ರಮುಖ ಶಿಷ್ಯನನ್ನು ಭೇಟಿಮಾಡುವೆ. ಅವನಿಂದ ನಿನ್ನ ಕೀರ್ತಿ ಪ್ರಸಾರವಾಗುವುದು. ಬಹು ಸಂಖ್ಯೆಯಲ್ಲಿ ಜನರು ನಿನ್ನ ಶಿಷ್ಯರಾಗುವರು. ನಿನ್ನಿಂದ ಲೋಕಕ್ಕೆ ಹಿತವಾಗುವುದಿದೆ"—ಎಂದಳು. ಆಗಲೆಂದು ಮಿಲರೇಪ ಗುಂಗ್‌ಥಂಗ್ ಪ್ರದೇಶಕ್ಕೆ ಹೋಗಿ ಅಲ್ಲಿ ಡ್ವೊಯ್ ಷ್ಯೋನು (ಯುವಾ ಚಂದ್ರಪ್ರಭ) ಎಂಬ ಭಿಕ್ಷುವನ್ನು ಭೇಟಿ ಮಾಡಿದ; ಇವನು ವಜ್ರಧರ ಪಂಥದ ಆಚಾರ್ಯನೆನಿಸಿದ್ದರೂ ಮಿಲರೇಪನಲ್ಲಿ ಶಿಷ್ಯವೃತ್ತಿ ಮಾಡಲನುವಾದ. ಇವನೇ ಮಿಲರೇಪನ ಶಿಷ್ಯರಲ್ಲಿ ಅಗ್ರಗಣ್ಯ. ಅದೇ ಸ್ಥಳದಲ್ಲಿಯೇ, ಹಿರಿಯ ಸಂಸ್ಕಾರದವರಾದ, ದೇವಾಂಶಸಂಭೂತರಾದ ಇಪ್ಪತ್ತೈದು ಮಂದಿ ಪ್ರಗಲ್ಭ ಶಿಷ್ಯರು ಮಿಲರೇಪನನ್ನು ಸೇರಿದರು. ಅಲ್ಲಿಂದ ಉಯ್ ಪ್ರಾಂತಕ್ಕೆ ಮಿಲರೇಪ ಬಂದಾಗ ಅಲ್ಲಿ ಡಂಪ-ಸಂಗ್ಯೆ ಮುಂತಾದ ಅನೇಕ ಮಂದಿ ಅವನ ಅನುಯಾಯಿಗಳಾದರು. ಹೀಗೆ ಅವನ ಪರ್ಯಟನೆಯಲ್ಲಿ ಶಿಷ್ಯಕೋಟಿ ಅವನ ಪ್ರಭಾವ ದೊಳಗೆ ಬಂದಿತು. ನಿರಂತರವಾಗಿ ಅವನು ಧರ್ಮೋಪದೇಶ ಮಾಡುತ್ತ ಶಿಷ್ಯರಿಗೆ ಮೋಕ್ಷಮಾರ್ಗ ತೋರಿಸಿ, ಜನ ಸಾಮಾನ್ಯರಿಗೆ ಸನ್ಮಾರ್ಗದಲ್ಲಿ ರುಚಿ ತೋರಿಸಿ ಬುದ್ಧದೇಶನ ದಿಗಂತ ವಿಶ್ರಾಂತವಾಗುವಂತೆ ಮಾಡಿದ.

# ದಿವ್ಯ ಬೋಧೆ

ಮಿಲರೇಪ ಟ್ರಿನ್ ಪ್ರಾಂತದಲ್ಲಿ ಮಾನವನ ಕಲ್ಯಾಣಕ್ಕಾಗಿ ಶ್ರಮಿಸುತ್ತಿದ್ದ. ಅಲ್ಲಿ ಟ್ಸಪುವಾ ಎಂಬ ಲಾಮ ನಿಸ್ಸೀಮ ಪಂಡಿತನೆಂದು ಪ್ರಸಿದ್ಧನಾಗಿ ಆ ನೆರೆಹೊರೆಯಲ್ಲೆಲ್ಲ ಶ್ರೀಮಂತ ಹಾಗೂ ಆಚಾರ್ಯನಾಗಿದ್ದ. ಅಲ್ಲಿ ಯಾವ ಸಭೆಯೆಂದರೂ ಅವನಿಗೆ ಅಗ್ರಸ್ಥಾನ. ಆದರೆ ಇವನಿಗೆ ಮಿಲರೇಪನ ಕೀರ್ತಿ ಸಹಿಸಲಿಲ್ಲ. ಒಂದು ಬಾರಿ ಮದುವೆಯ ಔತಣ ಸಮಾರಂಭವೊಂದ ರಲ್ಲಿ ಮಿಲರೇಪ ಆಹೂತನಾಗಿ ಬಂದಿದ್ದ! ಟ್ಸಪುವಾ ಲಾಮನೂ ಅಲ್ಲಿದ್ದು ಇಬ್ಬರೂ ಪಕ್ಕಪಕ್ಕದಲ್ಲಿಯೇ ಕೂಡುವ ಸಂದರ್ಭ ಬಂದಿತು. ಟ್ಸಪುವಾ ಲಾಮ ಸಾಂಪ್ರದಾಯಿಕವಾಗಿ ಮಿಲರೇಪ ನಿಗೆ ಪ್ರಣಾಮಮಾಡಿ, ಉತ್ತರವಾಗಿ ಮಿಲರೇಪನೂ ತನಗೆ ಪ್ರಣಾಮಮಾಡುವನೆಂದು ನಿರೀಕ್ಷಿಸುತ್ತಿದ್ದ. ಆದರೆ ಮಿಲರೇಪ ತನ್ನ ಗುರುವಿನ ವಿನಾ ಯಾರಿಗೂ ಪ್ರಣಾಮ ಮಾಡುತ್ತಿರಲಿಲ್ಲ; ಲಾಮನ ಪ್ರಣಾಮವನ್ನು ಹಸನ್ಮುಖದಿಂದ ಸ್ವೀಕರಿಸಿದ ಅಷ್ಟೆ. ಇದರಿಂದ ಲಾಮ ಕ್ರುದ್ಧನಾಗಿ ತನ್ನಲ್ಲಿ ತಾನು—"ಎಲಾ ಉದ್ಧಟ! ಎದೆ ಬಿರಿದು ಶೋಧಿಸಿದರೂ ಬಿಂದುವಷ್ಟು ವಿದ್ಯೆ ಯಿಲ್ಲ. ನನ್ನಂಥ ಸರ್ವಮಾನ್ಯ ಪಂಡಿತ ಚಕ್ರವರ್ತಿಯ ಮುಂದೆ ನಿನ್ನ ದುರಹಂಕಾರವೆ! ಇರಲಿ, ಈ ಸಭೆಯ ಮುಂದೆ ನಿನ್ನ ತೇಜೋವಧೆ ಮಾಡುತ್ತೇನೆ"—ಎಂದುಕೊಂಡು, ತನ್ನ ಬಳಿಯಿದ್ದ ತತ್ತ್ವ ಗ್ರಂಥವೊಂದನ್ನು ಮಿಲರೇಪನ ಮುಂದಿಟ್ಟು—"ಸ್ವಾಮಿ, ಈ ಗ್ರಂಥದಲ್ಲಿ ನನ್ನ ಸಂಶಯಗಳು ಅನೇಕ ಇವೆ, ದಯಮಾಡಿ ಅವನ್ನು ಪರಿಹಾರಮಾಡಿ"—ಎಂದ.

ಅದಕ್ಕೆ ಮಿಲರೇಪ—"ಗ್ರಂಥಸ್ಥವಾದ ಸಂಶಯಗಳನ್ನು

ಪರಿಹಾರಮಾಡಲು ನಿನಗಿಂತ ಸಮರ್ಥನಾದ ವಿದ್ವಾಂಸ ಯಾರು? ನಾನಂತೂ ಗ್ರಂಥದಲ್ಲಿರುವ ವಿದ್ವತ್ತಿಗೆ ಎಂದೂ ಬಾಯಿಬಿಟ್ಟವನಲ್ಲ! ನನಗೆ ಅಕ್ಷರ ಮುಖ್ಯವಲ್ಲ, ಅರ್ಥ ಮುಖ್ಯ. ಓದು, ವಿದ್ಯೆ ಮುಖ್ಯವಲ್ಲ; ವೃತ್ತಿ, ಧರ್ಮ ಮುಖ್ಯ. ಪ್ರವಚನ ಪ್ರಧಾನವಲ್ಲ, ಪ್ರಣಿಧಾನ ಪ್ರಧಾನ. ನನ್ನ ವಿದ್ಯೆ ಅಲ್ಪ, ಅದನ್ನೂ ಇಂದು ಮರೆತಿದ್ದೇನೆ. ಆದರೆ ಗ್ರಂಥಗಳ ನಿಜಾರ್ಥ ಅರಿಯಲು ಪ್ರಾಪಂಚಿಕದಲ್ಲಿ ಪ್ರಸಕ್ತಿ ತೊರೆಯಬೇಕು, ಅಹಂಕಾರ-ಮಮಕಾರ ಬಿಡಬೇಕು, ಏಕಾಂತದಲ್ಲಿ ಧ್ಯಾನಮಾಡಬೇಕು. ಈ ಧಾತುಪಾಠ, ವ್ಯುತ್ಪತ್ತಿ, ನಿರುಕ್ತ, ಪೂರ್ವಪಕ್ಷ—ಇವುಗಳಿಂದ ಏನು ಲಾಭ? ಧರ್ಮದ ನಿಜಸ್ವರೂಪ ಅನುಭವದಲ್ಲಿ ಬರಬೇಕು; ಅದಕ್ಕೆ ಯೋಗಾಭ್ಯಾಸವೇ ಸಾಧನ"—ಎಂದು ಉತ್ತರವಿತ್ತ. ಇದನ್ನು ಕೇಳಿ ಲಾಮ—"ಯೋಗಪಂಥದವರಿಗೆ ಇವೆಲ್ಲ ಸರಿಯಿರಬಹುದು; ಆದರೆ ನಮ್ಮ ಜಿಜ್ಞಾಸುಗಳಿಗೆ ಎಳ್ಳಷ್ಟೂ ಪ್ರಯೋಜನವಿಲ್ಲ. ನೀನೇನೋ ಮಹಾಪಂಡಿತನೆಂದು ನಾನು ಪ್ರಣಾಮ ಮಾಡಿದೆ! ನೀನಿಂಥ ನಿರಕ್ಷರ ಕುಕ್ಷಿಯೆಂಬುದು ತಿಳಿಯದೇಹೋಯಿತು!"—ಎಂದು ಜರಿಯಲು ನೆರೆದಿದ್ದ ಜನರೆಲ್ಲ—"ಪಂಡಿತರೇ, ನಿಮ್ಮ ಪಾಂಡಿತ್ಯ ಅಗಾಧವಿದ್ದೀತು, ಆದರೆ ನಿಮ್ಮಂಥ ಪಂಡಿತರೆಲ್ಲರೂ ಮಿಲರೇಪನ ರೋಮವೊಂದಕ್ಕೆ ಸರಿದೂಗಲಾರಿರಿ! ನಿಮಗೆ ನಾವು ಮಾಡಿರುವ ಮರ್ಯಾದೆಗೆ ತೃಪ್ತರಾಗಿ ಎಂದಿನಂತೆ ಧನಸಂಚಯನದಲ್ಲಿ ನಿರತರಾಗಿ, ನಿಮಗೆ ಧರ್ಮದ ಗೊಡವೆಯೇಕೆ?"—ಎಂದರು.

ಲಾಮನಿಗೆ ಕೋಪ ಮಿತಿಮೀರಿ ಕಟಕಟನೆ ಹಲ್ಲು ಕಡಿದ; ಆದರೆ ನೆರೆದವರೆಲ್ಲ ಎದುರಾಗಿ ನಿಂತಾಗ ಮಾಡುವುದೇನು? ಮೌನದಿಂದ ಅಂದಿನ ಸಭೆಯಲ್ಲಿದ್ದು ಮನೆಗೆ ಹೋದೊಡನೆ—" ಈ

ಕ್ರಿಮಿಯಿಂದ ನನಗಿಂದು ಭಂಗವಾಯಿತಲ್ಲ! ಅಬದ್ಧವಾಗಿ ಮಾತಾಡಿ ಸುಳ್ಳು ಸುಳ್ಳು ಬುರುಡೆ ಕೊಚ್ಚಿಕೊಂಡು, ಯೋಗ—ಧರ್ಮ ಎಂದು ಏನೇನೋ ಪ್ರಲಪಿಸುತ್ತ ಈ ಶುದ್ಧ ಅವಿವೇಕಿಯಾದ, ಅನಾಚಾರಿಯಾದ, ಕರ್ಮಭ್ರಷ್ಟನಾದ, ಮದಾಂಧನಾದ ಮಿಲರೇಪ ಈ ಊರಿನ ಜನರನ್ನು ವಶೀಕರಣಮಾಡಿಕೊಂಡು ಸುಪ್ರತಿಷ್ಠಿತ ಪಂಡಿತನಾದ ನನ್ನನ್ನು ಇಂದು ನಾಯಿಗಿಂತ ಕಡೆಗಾಣಿಸಿಬಿಟ್ಟನಲ್ಲ! ಇರಲಿ, ಅವನಿಗೆ ಪ್ರತೀಕಾರ ಮಾಡುವೆ''—ಎಂದುಕೊಂಡು ತನ್ನ ಸೂಳೆಯೊಬ್ಬಳನ್ನು ಕರೆದು ಅವಳಿಗೆ ರತ್ನಹಾರದ ಆಸೆ ತೋರಿಸಿ ವಿಷಬೆರತ ಕಜ್ಜಾಯಗಳನ್ನು ಮಾಡಿ ಮಿಲರೇಪನಿಗೆ ಕೊಟ್ಟುಬರುವಂತೆ ಪ್ರೇರಿಸಿದ. ಲಘು ಚಾರಿತ್ರ್ಯದ ಆಕೆ ಹಾಗೆಯೇ ಕಜ್ಜಾಯಗಳನ್ನು ಮಾಡಿ ಅದಕ್ಕೆ ಘೋರ ವಿಷವನ್ನು ಬೆರಸಿ ಮಿಲರೇಪನ ಬಳಿ ಸಾರಿ ಅವನಿಗೆ ಕಪಟದ ಪ್ರಣಾಮಮಾಡಿ ಕಜ್ಜಾಯಗಳನ್ನು ಮುಂದಿಟ್ಟು ಅದನ್ನುಣ್ಣುವಂತೆ ಬೇಡಿದಳು. ಲೋಕೋತ್ತರ ವಿಜ್ಞನಾದ ಮಿಲರೇಪನಿಗೆ ನಿಜವಾದ ಸಂಗತಿ ತಿಳಿಯದಿರಲಿಲ್ಲ; ಭೂಮಿಯ ಮೇಲೆ ವಜ್ರಯೋಗಿನೀದೇವತೆ ತನಗೆ ಮಾಡೆಂದು ಹೇಳಿದ್ದ ಕಾರ್ಯಗಳು ಮುಗಿದಿದ್ದು, ಜೀವನದಲ್ಲಿ ಅನುಪಮವಾದ ಸಿದ್ಧಿಯನ್ನು ಸಾಧಿಸಿ ಕೃತಾರ್ಥನಾಗಿದ್ದ ಅವನಿಗೆ ಅವಸಾನ ಸಮೀಪಿಸಿತೆಂದು ತಿಳಿದಿತ್ತು. ಹೀಗೆ ಆ ಕಜ್ಜಾಯಗಳನ್ನು ಪ್ರಾಣಹರಣವೆಂದು ತಿಳಿದೂ ತಿನ್ನಲು ನಿರ್ಧರಿಸಿದ. ಆದರೆ ಈಗಲೇ ತಾನು ತಿಂದುಬಿಟ್ಟರೆ ಲಾಮ ಆಕೆಗೆ ವಜ್ರಹಾರ ಕೊಡುವನೋ ಇಲ್ಲವೋ ಎಂದು ಬಗೆದು—''ಅಮ್ಮಾ, ಈ ಕಜ್ಜಾಯಗಳನ್ನು ಇಂದು ಸಂಜೆ ತಾ, ತಿನ್ನುತ್ತೇನೆ''—ಎಂದು ಹೇಳಿದ.

ಆಕೆ ಮಿಲರೇಪನಿಗೆಲ್ಲಿ ತನ್ನ ಕಪಟ ತಿಳಿದಿದೆಯೋ ಎಂದು

ಗಾಬರಿಯಾಗಿ ಲಾಮನ ಬಳಿ ಓಡಿಬಂದು ನಡೆದುದನ್ನು ಹೇಳಿ—"ಅವನು ದಿವ್ಯಜ್ಞಾನಿ. ನನ್ನ ಕ್ರೂರಾಚರಣೆಯನ್ನು ಕಂಡುಕೊಂಡುಬಿಟ್ಟ. ಮತ್ತೆ ನಾನು ಅವನ ಬಳಿ ಹೋಗುವುದಿಲ್ಲ"—ಎಂದಳು. ಅದಕ್ಕೆ ಲಾಮ—"ಅಯ್ಯೋ ಹುಚ್ಚಿ, ಅವನಿಗೆ ದಿವ್ಯಜ್ಞಾನವಿದ್ದು ಕಜ್ಜಾಯ ವಿಷಮಿಶ್ರವೆಂದು ತಿಳಿದಿದ್ದರೆ ಸಂಜೆ ತರಲು ಹೇಳುತ್ತಿದ್ದನೆ? ಅವನಿಗೆ ಅಂಥ ಸಿದ್ಧಿಗಳೇನೂ ಇಲ್ಲ, ಹೆದರಬೇಡ. ಇಗೋ, ರತ್ನಹಾರ ತೆಗೆದುಕೋ, ಹೋಗಿ ಅವನಿಗೆ ಕಜ್ಜಾಯಗಳನ್ನು ಕೊಟ್ಟು ಬಾ"—ಎಂದು ಪುಸಲಾಯಿಸಿದ. ಅವಳು ಭೀತಿಯಿಂದ ಒಪ್ಪದಿರಲು ಲಾಮ—"ನೀನು ಈ ಕಾರ್ಯ ಸಾಧಿಸಿದೆಯಾದರೆ ಈ ರತ್ನಹಾರಮಾತ್ರ ಲಾಭವೆಂದು ತಿಳಿಯಬೇಡ. ಈವರೆಗೆ ನಾವಿಬ್ಬರೂ ಗುಪ್ತವಾಗಿ ಸಂಸಾರ ನಡಸುತ್ತಿದ್ದೇವೆ. ಈರುಳ್ಳಿಯನ್ನು ಸ್ವಲ್ಪ ತಿಂದರೇನು, ಹೆಚ್ಚು ತಿಂದರೇನು? ಇನ್ನು ಮುಂದೆ ನಾವಿಬ್ಬರೂ ಗಂಡಹೆಂಡಿರಂತೆಯೇ ಇರುವ; ನನ್ನ ಮನೆಗೆ ನೀನೇ ಯಜಮಾನಿಯಾಗುವೆ"—ಎಂದ. ಮಾನಿನಿಯ ಮನಸ್ಸು ಬದಲಾಯಿತು. ಅಂದು ಸಂಜೆ ಪುನಃ ಮಿಲರೇಪನ ಬಳಿ ಹೋಗಿ ಆ ಕಜ್ಜಾಯಗಳನ್ನು ಮುಂದಿಟ್ಟಳು. ಅವನ್ನು ಮಿಲರೇಪ ಕೈಯಲ್ಲಿ ಎತ್ತಿಕೊಂಡ. ಆಕೆಗೆನಿಸಿತು—ಲಾಮ ಹೇಳಿದಂತೆ ಇವನಿಗೆ ದಿವ್ಯದೃಷ್ಟಿ ಇರದು—ಎಂದು. ಆದರೆ ಮಿಲರೇಪ—"ನಿನಗೆ ರತ್ನಹಾರ ಸಿಕ್ಕಿತೊ?"—ಎಂದು ಕೇಳಿದ. ಸೂಳೆ ಅವಾಕ್ಕಾದಳು; ಮೈ ಬೆವರು ಸುರಿಸಿ ನಡುಗಹತ್ತಿತು; ಕಣ್ಣು ಕತ್ತಲುಗೂಡಿತು. ದಿಗ್ಗನೆದ್ದು ಎದ್ದು ಆಕೆ ಮಿಲರೇಪನ ಕಾಲಿಗೆ ಬಿದ್ದು—"ಪ್ರಭೂ, ಮಹದಪರಾಧ ನನ್ನದು! ಪಾಪಿ ನಾನು! ಕಜ್ಜಾಯಗಳನ್ನು ನೀವು ತಿನ್ನದೆ ನನಗೆ ಕೊಡಿರಿ, ನಾನು ಸಾವಿಗೆ ಅರ್ಹಳು!"—ಎಂದು ಮುಂತಾಗಿ ಪ್ರಲಪಿಸಿದಳು.

ಆದರೆ ಮಿಲರೇಪ—" ಕಜ್ಜಾಯಗಳನ್ನು ನಿನಗೆ ಕೊಡಲಾರೆ. ಒಂದನೆಯದಾಗಿ, ನಿನ್ನಲ್ಲಿ ನನಗೆ ಅನುಕಂಪವಿದೆ; ಒಂದು ಪ್ರಾಣಿಯನ್ನೂ ಹಿಂಸಿಸೆನೆಂಬ ಬೋಧಿಸತ್ತ್ವ ಪ್ರಣಿಧಾನ ವ್ಯರ್ಥವಾದೀತು. ಎರಡನೆಯದಾಗಿ, ನನ್ನ ಸಾವು ಕಾಲಗತ ವಾಗಿಯೇ ಸಮೀಪಿಸಿದೆ; ಈ ಕಜ್ಜಾಯಗಳು ನಿರರ್ಥಕ. ಇವನ್ನು ಬೆಳಗ್ಗೆ ಬೇಡೆಂದುದು ನಿನ್ನ ಬಯಕೆಯ ರತ್ನಹಾರ ನಿನಗೆ ದೊರೆತು ನಿನಗೆ ಮನಃಶಾಂತಿ ಸಿಗಲೆಂದು. ಅದಾಯಿತಷ್ಟೆ! ಆದರೆ ಲಾಮ ನಿನ್ನನ್ನು ಒಡತಿಯಾಗಿ ಮಾಡಿಕೊಳ್ಳುವೆನೆಂದೆಲ್ಲ ಹೇಳುವುದು ಅನೃತ; ಅವನನ್ನು ನೀನು ನಂಬದಿರು. ನೀವಿಬ್ಬರೂ ಈ ದುಷ್ಕರ್ಮಕ್ಕಾಗಿ ಬಲು ಪಶ್ಚಾತ್ತಾಪಪಡುವ ಕಾಲ ಮುಂದೆ ಬರುವುದು. ಆಗ ಧ್ಯಾನಮಾರ್ಗ ಹಿಡಿದು ನಡೆದಿ ರಾದರೆ ನಿಮಗೆ ಈ ಜೀವನದಲ್ಲಿ ಸಮಾಧಾನ ದೊರೆಯುವುದಲ್ಲದೆ, ಮುಂದೆ ದುರ್ಗತಿಯ ಸಂಭವ ತಪ್ಪೀತು. ಇನ್ನು ಮುಂದಾ ದರೂ ಧರ್ಮ ಜೀವಿಗಳಾಗಿರಿ. ಈ ಪ್ರಸಂಗ ಮಾತ್ರ ರಹಸ್ಯ ವಾಗಿಯೇ ಇರಲಿ; ಕಾಲಾಂತರದಲ್ಲಿ ಇದು ಪ್ರಕಟವಾಗು ವುದು. ಆದರೆ ನಿಮ್ಮಿಂದ ಹೊರಬಿದ್ದರೆ ನಿಮಗೆ ತೊಂದರೆ ಯಾದೀತು,"—ಎಂದು ಹೇಳಿ ಆ ವಿಷಮಿಶ್ರ ಕಜ್ಜಾಯ ಗಳನ್ನು ತಿಂದುಬಿಟ್ಟನು.

ಆಕೆ ಲಾಮನ ಬಳಿ ಹೋಗಿ ನಡೆದುದನ್ನು ಹೇಳಲು ಆತ— " ಸರಿ, ಸರಿ, ಬೇಯಿಸಿದುದೆಲ್ಲ ಅನ್ನವೆ? ಹೇಳಿದುದೆಲ್ಲ ನಿಜವೆ? ಅವನು ಅದನ್ನು ತಿಂದನಲ್ಲ, ಅಷ್ಟು ಸಾಕು. ಇನ್ನು ಜೋಕೆ, ಯಾರ ಮುಂದೆಯಾದರೂ ಬಾಯಿ ಬಿಟ್ಟೀಯೆ!"—ಎಂದ.

ಇತ್ತ ಮಿಲರೇಪ ಮರುದಿನ ನೆರೆಯೂರುಗಳಾದ ಟಿಂಗ್ರಿ ಮತ್ತು ನ್ಯನಂ ಜನರಿಗೆಲ್ಲ ಹೇಳಿ ಕಳುಹಿಸಿ ದೊಡ್ಡದೊಂದು ಧರ್ಮ ಸಭೆ ನಡೆಸಿದ. ಈ ಜನರಿಗೆಲ್ಲ ಮಿಲರೇಪನಲ್ಲಿ ಅನನ್ಯ

ಭಕ್ತಿಯಿತ್ತು. ಹೀಗೆ ಮಿಲರೇಪ ಹೇಳಿ ಕಳುಹಿಸಿದುದರಿಂದ ಏನೋ ವಿಶೇಷವಿರಬೇಕೆಂದು ಬಗೆದು ಹೆಂಗಸರು—ಮಕ್ಕಳು, ಬಡವರು—ಬಲ್ಲಿದರು, ಮುಪ್ಪಿನವರು—ಹರೆಯದವರು, ಶಕ್ತರು—ಅಶಕ್ತರು ಎಲ್ಲರೂ ಬಂದು ನೆರೆದರು. ಶ್ರದ್ಧೆಯಿದ್ದವರು ಆಕಾಶದಲ್ಲಿ ದೇವತೆಗಳು ಬಂದು ಮಿಲರೇಪನ ಸುತ್ತ ನಿಂತಿರುವುದನ್ನು ಕಂಡರು. ಆ ಮಹಾಸಭೆಯಲ್ಲಿ ಮಿಲರೇಪ ಧರ್ಮಜೀವನದ ಆವಶ್ಯಕತೆಯ ಬಗ್ಗೆ ಬೋಧೆ ಮಾಡಿದ: "ಮಗು ತಾಯಿ ಒಡಲಿಂದ ಬಿದ್ದೊಡನೆ ಭವದ ಸೋಂಕು ಆರಂಭವಾಗುವುದು. ಸುಖದ ಬಯಕೆ ಹುಟ್ಟಿ ಹಬ್ಬುವುದು; ಪಾಪಕರ್ಮಗಳಿಗೆ ಹೃದಯ ಮಾರುಹೋಗುವುದು. ಸಾಮಾನ್ಯವಾಗಿ ಇಡೀ ಜೀವನವೇ ಹೀಗೆ ಧರ್ಮದ ವಿಚಾರ ಅರಿಯದೆ ಪಾಪಕೂಪದ ಮಡಿಲಲ್ಲಿ ತೊಳಲುವುದು. ಇಂಥ ಜೀವನದಿಂದ ಅಹಿತವೇ ಸಿದ್ಧ. ಪಾಪ ಮಾಡದ ಮನುಷ್ಯ ಒಬ್ಬನಿಲ್ಲ, ನಿಜ; ಆದರೆ ಪಾಪಕ್ಕೆ ಪರಿಹಾರ ಉಂಟು, ನೈಜವಾದ ಪಶ್ಚಾತ್ತಾಪದಿಂದ ಪಾಪದ ಹೊರೆ ಇಳಿಯುತ್ತದೆ. ಒಂದೊಂದು ಪುಣ್ಯ ಕರ್ಮದಿಂದಲೂ ಹಿಂದೆ ಮಾಡಿದ ಪಾಪ ರಾಶಿಯಲ್ಲಿ ಅಷ್ಟಷ್ಟು ಕರಗುತ್ತದೆ. ಪ್ರಾಪಂಚಿಕ ಜೀವನದಲ್ಲಿ ಹೇಯ ಬುದ್ಧಿ ಉತ್ಪನ್ನವಾಗಬೇಕು; ಲೌಕಿಕ ಸುಖವೆಂದರೆ ಅನಾದರ ಇರಬೇಕು; ಧರ್ಮ ಜೀವನದಲ್ಲಿ ಶ್ರದ್ಧೆ ತಾಳಬೇಕು. ಅದೀಗ ಮನುಷ್ಯ ಜೀವನದ ಕೃತಾರ್ಥತೆಗೆ ದಾರಿ. ನೆರೆದಿರುವ ಸಜ್ಜನರೇ, ನನ್ನನ್ನು ಮುಪ್ಪು ಆವರಿಸಿದೆ; ದೇಹ ಶಿಥಿಲವಾಗಿದೆ. ಇಷ್ಟರಲ್ಲೇ ನಾನು ತೀರಿಕೊಳ್ಳುವ ಸೂಚನೆಗಳು ಕಂಡುಬರುತ್ತಿವೆ. ನನ್ನಲ್ಲಿ ನೀವು ಶ್ರದ್ಧೆಯಿಟ್ಟಿದ್ದರೆ ನನ್ನದೊಂದೇ ಅಭ್ಯರ್ಥನೆಯನ್ನು ನಡೆಸಿಕೊಡಿ. ನೀವೆಲ್ಲ ಧರ್ಮ ಜೀವನದಲ್ಲಿ ನಡೆಯಲು ಪ್ರತಿಜ್ಞೆಮಾಡಿ. ನಿಮಗೆಲ್ಲ ಶುಭವಾಗಲಿ!"

ಆಗ ನ್ಯನಂ ಜನರೆಲ್ಲ ಮುಂದೆ ಬಂದು ಮಿಲರೇಪನ ಪಾದಗಳಿಗೆ ಪ್ರಣಾಮ ಮಾಡಿ—"ಗುರುಗಳೇ, ತಾವಿಂದೇ ನ್ಯನಂ ನಗರಕ್ಕೆ ಬರಬೇಕು; ನಮ್ಮ ನೆಲ ಪವಿತ್ರವಾಗಬೇಕು. ನಿಮ್ಮ ನಿರ್ಯಾಣ ಭೂಮಿ ನಮ್ಮ ಊರೆಂಬ ಕೀರ್ತಿ ಉಳಿಯಬೇಕು"—ಎಂದು ಬೇಡಿಕೊಂಡರು. ಹಾಗೆಯೇ ಇತರ ನಗರಗಳವರೂ ಬಂದು ತಂತಮ್ಮ ನಡುವೆ ಬಂದಿದ್ದು ಮೋಕ್ಷಕ್ಕೆ ಸಾಗಿರೆಂದು ಕೇಳಿಕೊಂಡರು. ಆದರೆ ಮಿಲರೇಪ—"ಧರ್ಮಾತ್ಮರೇ, ನೀವು ನನ್ನಲ್ಲಿಟ್ಟಿರುವ ಪ್ರೀತಿ, ಭಕ್ತಿ ಅದ್ಭುತವಾದದ್ದು. ನನ್ನ ಮುಕ್ತಿಯ ಸಿದ್ಧಿಯನ್ನು ಬಿಟ್ಟರೆ ಇದೇ ನನಗೆ ಪರಮ ಲಾಭ; ನಿಮಗೆಲ್ಲ ನಾನು ಋಣಿ. ನನ್ನ ನಿತ್ಯ ಜೀವನದ ಆವಶ್ಯಕತೆಗಳನ್ನು ಒದಗಿಸಿರುವಿರಿ; ನನ್ನ ಧ್ಯಾನ ಚರಣ ಅವ್ಯಾಹತವಾಗಿ ನಡೆಯಲು ಅಣಿ ಮಾಡಿದಿರಿ. ಈ ನಿಮ್ಮ ಉಪಕಾರಕ್ಕಾಗಿ ನಾನು ಆಗಾಗ ಧರ್ಮಬೋಧೆಗಳನ್ನು ಮಾಡಿದ್ದೇನೆ. ಈಗ ನಿಮಗೆಲ್ಲ ಸಕಲ ಶುಭವಾಗಲೆಂದು ಮನಸಾರೆ ಬಯಸುತ್ತೇನೆ. ಆದರೆ ಪ್ರಯಾಣ ಮಾಡುವುದು ಈ ಇಳಿ ವಯಸ್ಸಿನಲ್ಲಿ ನನ್ನಿಂದಾಗದು; ನನ್ನ ದೇಹ ಬಹಳ ಬಳಲಿದೆ. ಇದೇ ಬ್ರಿನ್ ದೇಶದಲ್ಲೇ ಇದ್ದುಕೊಂಡು ಸಾಯುವೆ. ಇನ್ನು ನಿಂನಿಮ್ಮ ಊರುಗಳಿಗೆ ತೆರಳಿರಿ. ಶುಭವಾಗಲಿ"—ಎಂದು ಅವರೆಲ್ಲರನ್ನೂ ಬೀಳ್ಕೊಟ್ಟನು. ಒಬ್ಬೊಬ್ಬರೂ ಪ್ರತ್ಯೇಕವಾಗಿ ಬಂದು ಮಿಲರೇಪನ ಪಾದಗಳಿಗೆರಗಿ ಪ್ರದಕ್ಷಿಣೆ ಮಾಡಿ ಅನನ್ಯ ಮನಸ್ಸಿನಿಂದ ನಮಸ್ಕರಿಸಿ ಹೋದರು.

ನಂತರ ಬ್ರಿನ್ ಜನರೆಲ್ಲ ಸೇರಿ ಊರ ಹೊರಗಿನ ಉದ್ಯಾನವೊಂದರಲ್ಲಿ ಕುಟೀರವೊಂದನ್ನು ಏರ್ಪಡಿಸಿ ಅಲ್ಲಿ ಮಿಲರೇಪನ ವಾಸ, ಪ್ರವಚನಗಳಿಗೆ ಅಣಿ ಮಾಡಿದರು. ಊರ ಜನರೆಲ್ಲ ಸಂಜೆಯಂದು ನೆರೆದು ಅವನ ಧರ್ಮ ಬೋಧೆಯನ್ನು ಕೇಳಿದರು.

ಮರುದಿನ ಮಿಲರೇಪನ ದೇಹದಲ್ಲಿ ಸ್ವಲ್ಪ ಆಲಸ್ಯ ತೋರಲು ಹತ್ತಿರದ ಶಿಷ್ಯರು ದೇವತೆಗಳಿಗೆ ಪೂಜೆ ಮಾಡಿ ಗುರುವಿನ ಯೋಗಕ್ಷೇಮ ಸಾಧಿಸಲು ಆಲೋಚಿಸಿದರು; ಕೆಲವರು ಗುರುವನ್ನು ಸನ್ನಿಹಿತವಾದ ಸಾವನ್ನು ತಮ್ಮ ಮಂತ್ರ ಶಕ್ತಿಯಿಂದ ನಿವಾರಿಸಿಕೊಳ್ಳಿರೆಂದು ಬೇಡಿಕೊಂಡರು; ಕೆಲವರು ಔಷಧೋಪಚಾರದಿಂದ ರೋಗ ಶಮನ ಮಾಡುವೆವೆಂದರು. ಮಿಲರೇಪ ಒಂದಕ್ಕೂ ಒಪ್ಪಲಿಲ್ಲ. "ಇದು ಕಾಲವಶದಿಂದ ಪ್ರಾಪ್ತವಾದ ಸಂದರ್ಭ. ರಾಜನ ದಂಡಕ್ಕೆ ಮೃತ್ಯು ಹೆದರದು, ವೀರನ ಬಾಹುಬಲಕ್ಕೆ ಅಂಜದು, ಸುಂದರಿಯ ಮಂದಹಾಸಕ್ಕೆ ಮರುಳಾಗದು; ಶ್ರೀಮಂತನ ನಿಧಿಯೆಂದರೆ ಸಾವಿಗೆ ಪಕ್ಷಪಾತವಿಲ್ಲ; ಹೇಡಿ ಅಂಜಿ ಓಡಿದರೆ ಮರಣ ಹಿಡಿಯದೆ ಬಿಡದು; ಪಂಡಿತ ತನ್ನ ತರ್ಕಚಾತುರ್ಯದಿಂದ ಮೃತ್ಯುವನ್ನು ಸೋಲಿಸಲು ಸಾಧ್ಯವಿಲ್ಲ. ಹುಟ್ಟಿದ ಜಂತು ಸಾಯದಿರಲು ಯಾವ ಉಪಾಯವೂ ಇಲ್ಲ. ಈ ನಿಮ್ಮ ಜಾಣ್ಮೆಗಳೆಲ್ಲ ನಿರರ್ಥ. ಅಲ್ಲದೆ ಭೂಮಿಯ ಮೇಲೆ ನಾನು ಮಾಡಬೇಕಾಗಿದ್ದ ಕರ್ಮಗಳೆಲ್ಲ ಮುಗಿದಿವೆ; ನನ್ನಿಂದ ಇನ್ನು ಪ್ರಯೋಜನ ಇಲ್ಲ. ನಾನಂತೂ ಸಾವಿಗೆ ಸಿದ್ಧವಾಗಿದ್ದೇನೆ."

---

# ಸಿದ್ಧಿ ಮತ್ತು ಸಮಾಧಿ

ಕ್ರಮೇಣ ಮಿಲರೇಪನ ರೋಗ ಉಲ್ಬಣ ಸ್ಥಿತಿಯನ್ನು ಮುಟ್ಟಿತು. ಈ ಸಮಯದಲ್ಲಿ ಅವನ ಸ್ಥಿತಿ ಹೇಗಿದೆಯೆಂಬುದನ್ನು ಅರಿಯಲು ಲಾಮಟ್ಸ ಪುವಾ(ಮಿಲರೇಪನಿಗೆ ವಿಷಮಿಶ್ರ ಕಜ್ಜಾಯ ಕೊಡಿಸಿದವನು) ಬಂದು—"ಅಯ್ಯೋ, ನಿಮ್ಮಂಥ ಯೋಗಿಗೆ ಇಂಥ ರೋಗ ಬರುವುದೆಂದರೇನು ? ಇದು ಬಂದಿದೆಯಾದ್ದರಿಂದ ನಿಮ್ಮ ಶಿಷ್ಯರಲ್ಲೆಲ್ಲ ಇದನ್ನು ವ್ಯಯಮಾಡಿ ನೀವು ಸ್ವಸ್ಥರಾಗ ಬೇಕು; ಇಲ್ಲವೇ, ಈ ರೋಗವನ್ನು ನನಗೆ ಪರಿವರ್ತ ಮಾಡುವು ದಾದರೆ ಮಾಡಿರಿ, ನಾನು ಅನುಭವಿಸಲು ಸಿದ್ಧನಿದ್ದೇನೆ"— ಎಂದು ಕಪಟವಾಗಿ ನುಡಿದ. ಮಿಲರೇಪ—"ನನಗೆ ಈ ರೋಗ ಬರಲು ಕಾರಣವೇ ಇಲ್ಲ; ಆದರೆ ಇದರಲ್ಲಿ ನನ್ನ ಇಚ್ಛೆ ಇರದು. ಯೋಗಿಯ ರೋಗ ಸಾಮಾನ್ಯ ಮನುಷ್ಯರ ರೋಗದಂತಲ್ಲ, ಇದು ನನಗೆ ಭೂಷಣಪ್ರಾಯ. ಈ ರೋಗವನ್ನು ಬೇರೊಬ್ಬ ರಿಗೆ ಪರಿವರ್ತ ಮಾಡಲು ನನಗೆ ಸಾಧ್ಯ. ಆದರೆ ನಾನು ಹಾಗೆ ಮಾಡುವುದಿಲ್ಲ"—ಎನ್ನಲು, ಲಾಮ ತನ್ನಲ್ಲಿ ತಾನು—"ಈ ಮುದ್ಕಿಗೆ ನನ್ನ ವಿಷಪ್ರಾಶನದ ವಿಚಾರ ತಿಳಿದಿದ್ದೀತೆ? ಇರದು. ಇವನು ರೋಗವನ್ನು ಪರಿವರ್ತ ಮಾಡುವನೆಂಬ ಸೊಲ್ಲಂತೂ ಶುದ್ಧ ಅಬದ್ಧ—" ಎಂದುಕೊಂಡು, ಮೇಲೆ—"ಅಯ್ಯೋ, ಹಾಗುಂಟೆ? ಈ ರೋಗಕ್ಕೆ ನಿಮಿತ್ತವೇನೆಂಬುದನ್ನು ಅರಿಯೆ. ದೇವತೆಗಳ ಕ್ರೂರ ದೃಷ್ಟಿಯಿಂದ ಆದದ್ದಾದರೆ ಶಾಂತಿ ಮಾಡಿಸ ಬೇಕು. ದೈಹಿಕವೇ ಆದದ್ದಾದರೆ ಔಷಧೋಪಚಾರ ನಡಸಬೇಕು. ತಮಗೆ ಪರಿವರ್ತ ಮಾಡಲು ಸಾಧ್ಯವಿದ್ದರೆ ನನಗೆ ತಮ್ಮ ರೋಗ

ವನ್ನು ಕೊಡಿರಿ—" ಎಂದ. ಮಿಲರೇಪ—"ಒಬ್ಬ ಜೀವಿಗೆ ಪಾಪದ ಪಿಶಾಚಿ ಹಿಡಿಯಿತು, ಸ್ವಾರ್ಥವೆಂಬುದೇ ಅದು. ಅದರಿಂದ ಈ ನನ್ನ ರೋಗ ಪ್ರಸ್ತುತವಾಗಿದೆ. ಇದಕ್ಕೆ ಶಾಂತಿಯಾಗಲೀ, ಔಷಧವಾಗಲೀ ಪ್ರಯೋಜನವಿಲ್ಲ. ರೋಗ ಪರಿವರ್ತ ಮಾಡಲು ನನಗೆ ಸಾಧ್ಯ ; ಆದರೆ ಈ ರೋಗದ ಭರವನ್ನು ಒಂದು ಅರೆಕ್ಷಣವೂ ನೀನು ಸಹಿಸಲಾರೆ"—ಎನ್ನಲು ಲಾಮ ತನ್ನಲ್ಲಿ ತಾನು—"ಬರೀ ಮಾತಾಡುತ್ತಾನೆ, ಅಷ್ಟೆ. ಅಷ್ಟೆಲ್ಲ ಶಕ್ತಿಯಿದ್ದರೆ ಹೀಗಿರುತ್ತಿದ್ದನೆ? ಶಕ್ತಿಯಿಲ್ಲ ಎಂದು ಒಪ್ಪಿಕೊಳ್ಳಲು ನಾಚಿ ಇಷ್ಟವಿಲ್ಲ ಎನ್ನುತ್ತಾನೆ!"—ಎಂದುಕೊಂಡು, ಪ್ರಕಟವಾಗಿ, "ಇಲ್ಲ, ಇಲ್ಲ, ನನಗೆ ದಯೆಮಾಡಿ ತಮ್ಮ ರೋಗವನ್ನು ಪರಿವರ್ತ ಮಾಡಿರಿ" ಎಂದು ಮತ್ತೆ ಮತ್ತೆ ಕೇಳಿದ. ಮಿಲರೇಪ "ಆಗಲಿ, ರೋಗದ ತೀಕ್ಷ್ಣತೆಯನ್ನು ನಿನಗೆ ತೋರಿಸುತ್ತೇನೆ. ಆದರೆ ನಿನಗೆ ಅದನ್ನು ಪರಿವರ್ತ ಮಾಡುವುದಿಲ್ಲ, ಆ ಬಾಗಿಲಿಗೆ ಮಾಡುತ್ತೇನೆ"—ಎಂದು ಹೇಳಿ ತನ್ನ ಕೋಣೆಯ ಬಾಗಿಲಿಗೆ ತನ್ನ ರೋಗವನ್ನು ಪರಿವರ್ತ ಮಾಡಲು ಮಿಲರೇಪ ಅರೋಗನಾಗಿ ದೃಢನಾಗಿ ಎದ್ದು ಕುಳಿತ ; ಆ ಬಾಗಿಲಾದರೋ ಇದ್ದಕ್ಕಿದ್ದಂತೆ ಚಟ್ ಪಟ್ ಎಂದು ಒಡೆದು ಜೋರಾಗಿ ಕಂಪಿಸಲು ಶುರುವಾಯಿತು ; ಒಂದು ಕ್ಷಣದಲ್ಲಿ ನುಚ್ಚುನೂರಾಗಿ ಪುಡಿಪುಡಿಯಾಗಿ ಬಿದ್ದಿತು. ಇದನ್ನು ನೋಡುತ್ತಿದ್ದ ಲಾಮ—" ಓ ಇದು ಯಕ್ಷಿಣಿ ಇದ್ದೀತು, ನನ್ನ ಮೇಲೆ ಪರಿವರ್ತ ಮಾಡುವಷ್ಟು ಶಕ್ತಿ ಇವನಿಗೆಲ್ಲಿ ಬಂದೀತು?"—ಎಂದುಕೊಂಡು, ಪ್ರಕಟವಾಗಿ—" ಆಹಾ! ಅದ್ಭುತ! ಆಶ್ಚರ್ಯ! ನಿಜವಾಗಿ ನೀವು ನನಗೆ ಪರಿವರ್ತ ಮಾಡಬೇಕು"—ಎನ್ನಲು ಮಿಲರೇಪ ನಕ್ಕು ಆ ರೋಗವನ್ನು ಬಾಗಿಲಿನಿಂದ ತೆಗೆದುಕೊಂಡು ಲಾಮನಿಗೆ ಅರೆಕ್ಷಣ ಮಾತ್ರ ಪರಿವರ್ತ ಮಾಡಿದ. ಲಾಮ ರೋಗದ ಭರವನ್ನು ತಡೆಯಲಾರದೆ ಕುಯ್ಯೊ ಮರ್ರೊ ಎಂದು

ಕೂಗಿಕೊಂಡು, ದೆವ್ವ ಹಿಡಿದವನಂತೆ "ಉರಿ! ಉರಿ!" ಎಂದು ಅರಚುತ್ತ ಮೂರ್ಛೆಹೋದ. ಒಡನೆಯೇ ಮಿಲರೇಪ ರೋಗ ವನ್ನು ಪುನಃ ತನ್ನಲ್ಲಿಯೇ ಬರಮಾಡಿಕೊಳ್ಳಲು ಲಾಮ ಸಂಜ್ಞೆ ತಿಳಿದೆದ್ದು ಓಡಿ ಬಂದು ಮಿಲರೇಪನ ಕಾಲಿಗೆ ಬಿದ್ದು—"ತಾವು ಮಹಾತ್ಮರು! ಅಜ್ಞನಾಗಿ ತಮ್ಮಲ್ಲಿ ದೋಷವೆಣಿಸಿದೆ! ತಮಗೆ ಅಪಚಾರ ಮಾಡಿದ ಪಾಪಿ ನಾನು! ಈ ನನ್ನ ಚರಾಚರ ಸ್ವತ್ತ ನ್ನೆಲ್ಲ ತಮಗೆ ನಿವೇದಿಸುತ್ತೇನೆ, ನನ್ನಲ್ಲಿ ಕರುಣೆ ಮಾಡಿ ಕ್ಷಮಿಸಿರಿ" —ಎಂದು ಅಶ್ರುಧಾರೆಯನ್ನು ಹರಿಸುತ್ತ ಬೇಡಿಕೊಂಡ. ಮಿಲ ರೇಪ ನಕ್ಕು,—"ಅಯ್ಯಾ, ನನ್ನ ಇಡೀ ಬಾಳುವೆಯಲ್ಲೇ ನನ್ನ ದೆನ್ನುವ ಸ್ವತ್ತು ಒಂದಿಲ್ಲ. ಈಗ ಸಾವಿನ ಸನ್ನಿಧಿಯಲ್ಲಿ ನಿಂತ ನನಗೆ ನಿನ್ನ ಸ್ವತ್ತಿನಿಂದ ಏನು ಪ್ರಯೋಜನ? ನಿನ್ನ ಪಶ್ಚಾತ್ತಾಪ ನಿಜವಾದುದೆಂಬುದನ್ನು ಅರಿತಿದ್ದೇನೆ. ನಿನ್ನ ಪಾಪ ಕರ್ಮಗಳು ಪಕ್ವವಾಗದಂತೆ ನನ್ನ ಮಂತ್ರ ಶಕ್ತಿಯನ್ನು ಪ್ರಯೋಗಿಸುತ್ತೇನೆ; ನಿನಗೆ ದುರ್ಗತಿಯ ಭಯವಿಲ್ಲ. ಇನ್ನು ಮುಂದಾದರೂ ಪುಣ್ಯ ಕರ್ಮಗಳಲ್ಲೇ ನಿರತನಾಗು"—ಎಂದು ಹೇಳಿ ಅವನನ್ನು ಸನ್ಮಾನದಿಂದ ಬೀಳ್ಕೊಟ್ಟ.

ಹೀಗೆ ದುಷ್ಕರ್ಮಿಯೊಬ್ಬನು ಸಂತನಾಗಿ ಪರಿಣಮಿಸಿದ ಮೇಲೆ ಮಿಲರೇಪ ಊರಜನರನ್ನೆಲ್ಲ ಸೇರಿಸಿ—"ಭೂಮಿಯ ಮೇಲಿದ್ದು ನಾನು ಮಾಡುವುದೆಲ್ಲ ಮುಗಿಯಿತು; ಇನ್ನು ನನ್ನಿಂದ ಜನರಿಗೆ ಪ್ರಯೋಜನವಿಲ್ಲ; ಅಲ್ಲದೆ, ಯೋಗಿ ಊರಿನಲ್ಲಿದ್ದು ಜನದ ನಡುವೆ ನಿರ್ಯಾಣ ಹೊಂದಬಾರದೆಂಬ ಶಾಸ್ತ್ರ ನಿಯಮ ಇದೆ. ಅದು ಕಾರಣ ನಾನು ಛೂಬಾರ್ ಪ್ರದೇಶಕ್ಕೆ ಹೋಗಿ ಅಲ್ಲಿ ಅರಣ್ಯದಲ್ಲಿ ಸಾಯುವೆನು"—ಎಂದು ಹೇಳಿದನು. ಊರಿನ ಪ್ರಮುಖರು—"ಗುರುಗಳೇ, ತಾವು ದೇಹದಲ್ಲಿ ನಿತ್ರಾಣರು; ಛೂಬಾರಿಗೆ ನಡೆಯುವುದು ನಿಮ್ಮಿಂದಾಗದು. ಪಲ್ಲಕ್ಕಿಯನ್ನು

ಸಿದ್ಧಮಾಡುತ್ತೇವೆ"—ಎನ್ನಲು ಮಿಲರೇಪ—"ಅದೊಂದೂ ಅವಶ್ಯವಿಲ್ಲ. ಯೋಗಿಗೆ ನಿರ್ಯಾಣವೆಂದರೇನು? ನನ್ನ ಮಂತ್ರ ಶಕ್ತಿಯಿಂದಲೇ ಛೂಬಾರಿಗೆ ಹೋಗುತ್ತೇನೆ. ನನ್ನನ್ನು ಕಡೆ ಗಾಲದ ವರೆಗೆ ನೋಡಬೇಕೆಂದು ಉತ್ಸುಕರಾದ ಶಿಷ್ಯರು ಛೂಬಾರಿನ ಗೋಜಿಹ್ವಾ ಗುಹೆಗೆ ಬರಲಿ"—ಎಂದು ಹೇಳಿದ. ಅಂದು ಊರಿನವರೆಲ್ಲ ಅತಿ ಸಂಭ್ರಮದಿಂದ ಮಿಲರೇಪನಿಗೆ ಮನೆ ಮನೆಯಲ್ಲೂ ಪೂಜೆಮಾಡಿ, ಹಾರ್ದಿಕವಾದ ಆತಿಥ್ಯವಿತ್ತು, ತುಂಬಿದ ಹೃದಯದಿಂದ ಬೀಳ್ಕೊಟ್ಟರು.

ಕೆಲವು ದೃಢಕಾಯರಾದ, ಉತ್ಸುಕರಾದ, ಶಿಷ್ಯರು ಮಾತ್ರ ಮಿಲರೇಪನೊಂದಿಗೆ ಗೊಂಡಾರಣ್ಯದ ನಡುವೆ ಇದ್ದ ಗೋಜಿಹ್ವಾ ಗುಹೆಗೆ ಬಂದರು. ಮಿಲರೇಪನಿಗೆ ದೇಹಾಲಸ್ಯ ತೀವ್ರವಾಯಿತು. ಆದರೆ ಒಂದು ಗಳಿಗೆಯಲ್ಲಿ ಇದ್ದಕ್ಕಿದ್ದಂತೆ ಅವನ ಮೈಯಿಂದ ಆನಂದ ಕಿರಣಗಳು ಹೊರಹೊಮ್ಮಿದುವು! ಕಾನನವೆಲ್ಲ ಪ್ರಶಾಂತ ವಾಯಿತು; ಆಗಸದಲ್ಲಿ ಇಂದ್ರ ಧನುಸ್ಸುಗಳ ಮಾಲೆ ಕಂಡು ಪ್ರಕೃತಿ ಸರ್ವ ಸುಂದರವಾಯಿತು. ಆಗ ಮಿಲರೇಪ ಹತ್ತಿರ ಇದ್ದ ಶಿಷ್ಯರನ್ನು ಕರೆದು —"ಅಣ್ಣಗಳಿರಾ, ಇದೇ ನನ್ನ ಅಂತಿಮ ಪ್ರವಚನ, ಚೆನ್ನಾಗಿ ಮನನಮಾಡಿರಿ. ಧರ್ಮ ಜೀವಿ ಗಳೆಂಬ ಡಂಭ ನಿಮಗೆ ಸಲ್ಲದು; ಧನಕ್ಕೆ, ಕೀರ್ತಿಗೆ ಆಸೆಪಟ್ಟು ಧರ್ಮವನ್ನು ಅವಲಂಬಿಸುವುದು ಹೇಯವಾದದ್ದು. ಯೋಗಿ ಯಾದವನಿಗೆ ಪ್ರಪಂಚದ ಒಂದು ಸೊಂಕೂ ಇರಬಾರದು. ಬಹು ಜನರ ಹಿತಕ್ಕಾಗಿ ಧರ್ಮಜೀವಿ ತವಕಿಸಿ ಪ್ರಪಂಚ ವ್ಯವಹಾರದಲ್ಲಿ ಇರಬಾರದೇ ಎಂದು ನೀವು ಕೇಳಬಹುದು. ಸ್ವಾರ್ಥದ ಲೇಶವೂ ಇರದಿದ್ದರೆ ಇರಬಹುದು; ಆದರೆ ಪ್ರಪಂಚದಲ್ಲಿ ಸ್ವಾರ್ಥದ ಲೇಶವೂ ಇಲ್ಲದಿರುವುದು ಸಾಮಾನ್ಯವಾಗಿ ಅಸಂಭವ. ಬಹು ಜನರ ಹಿತ ಮಾಡುತ್ತೇನೆಂಬ ಚಿಂತೆ ಬರುವ ಮುಂಚೆ ನಿಮ್ಮ ಹಿತ

ವನ್ನೇ ಮಾಡಿಕೊಳ್ಳಿ. ಪ್ರವಾಹದಲ್ಲಿ ತಾನೇ ಮುಳುಗುತ್ತಿರುವವನು ಮತ್ತೊಬ್ಬನನ್ನು ಪಾರಗಾಣಿಸುವುದು ಹೇಗೆ? ನಿಷ್ಠೆಯಿಂದ, ಅಪ್ರಮಾದದಿಂದ ಧ್ಯಾನಯೋಗದಲ್ಲಿ ನಿಂತು ನಿಮ್ಮ ನಿಮ್ಮ ನಿರ್ವಾಣವನ್ನು ಸಾಧಿಸಿಕೊಳ್ಳಿ. ಪ್ರತಿಯೊಂದು ಜೀವಿಯಲ್ಲೂ ಬುದ್ಧತ್ವದ ಬೀಜ ಇದೆ; ಅದನ್ನು ಪೋಷಿಸಿ ವೃಕ್ಷವಾಗಿಸಿರಿ—ಅದರ ಫಲದಿಂದ ಸರ್ವಭೂತಹಿತವಾಗುವುದು. ಯೋಗಿಗೆ ವಿನಯ ಭೂಷಣ; ದಾರಿದ್ರ್ಯವೆ ಆಭರಣ; ಚಿಂದಿ ಬಟ್ಟೆಯನ್ನೇ ಉಟ್ಟುಕೊಳ್ಳಿ. ಅತ್ಯಲ್ಪ ಆಹಾರವನ್ನೇ ಉಣಿರಿ. ಸಿರಿತನ, ಹಿರಿತನ ಎರಡನ್ನೂ ವಿಷವೆಂದು ದೂರ ಇಡಿ. ಅನುಭೂತಿಯಿಂದ ಜ್ಞಾನಾರ್ಜನೆ ಮಾಡಿ. ದೇಹವನ್ನು ದಂಡಿಸಿ ಮನಸ್ಸನ್ನು ನಿರ್ವಾಣದೆಡೆಗೆ ಬಿಡಿರಿ.'' ಹೀಗೆ ಹೇಳಿ ಮಿಲರೇಪ ಸಿದ್ಧಾಸನದಲ್ಲಿ ಕೂತು ಸಮಾಧಿಮಗ್ನನಾದ. ತುಸು ಹೊತ್ತಿನಲ್ಲೇ ದೇಹ ಜಡವಾಗಿ ಕೆಳಗೆ ಬಿದ್ದಿತು. ಆಗ ಮಿಲರೇಪನಿಗೆ ಎಂಬತ್ತು ನಾಲ್ಕು ವರ್ಷಗಳು. ಅವನ ನಿರ್ಯಾಣವಾದದ್ದು ಕ್ರಿಸ್ತಾಬ್ದ ೧೧೩೫ ರಲ್ಲಿ.





# ಕಾವ್ಯಾಲಯದ ಪ್ರಕಟನೆಗಳು ಮತ್ತು ಏಜನ್ಸಿ ಪುಸ್ತಕಗಳು : ಅಕಾರಾದಿ

| | ರೂ. ನ.ಪೈ. |
|---|---|
| ಅನ್ತಃಪುರಗೀತೆ—ಡಿ. ವಿ. ಜಿ. .... .... | ೩.೫೦ |
| ಅರಿಸ್ಟಾಟಲನ ಕಾವ್ಯಮೀಮಾಂಸೆ—ಎನ್. ಬಾಲಸುಬ್ರಹ್ಮಣ್ಯ .... .... | ಅಚ್ಚಿನಲ್ಲಿ |
| ಅಲೆಯುವ ಮನ—ಎ. ಎನ್. ಮೂರ್ತಿರಾವ್ .... | ೨.೨೫ |
| ಅವರಿಲ್ಲದ ಊಟ—ಎಂ. ಎಸ್. ಪುಟ್ಟಣ್ಣ .... | ಅಚ್ಚಿನಲ್ಲಿ |
| ಅಹಲ್ಯೆ—ಪು. ತಿ. ನರಸಿಂಹಾಚಾರ್ .... .... | ೨.೨೫ |
| ಅಂಚೆಮನೆ—ರವೀಂದ್ರನಾಥ ಠಾಕೂರ್ .... .... | ೦.೭೫ |
| ಆರು ಹಂಸಗಳು—ಗ್ರಿಮ್ ಸೋದರರು .... .... | ಅಚ್ಚಿನಲ್ಲಿ |
| ಆರ್ಯಕೀರ್ತಿ—ಚ. ವಾಸುದೇವಯ್ಯ .... .... | ೨.೨೫ |
| ಆಷಾಢಭೂತಿ—ಎ. ಎನ್. ಮೂರ್ತಿರಾವ್ .... | ೧.೦೦ |
| ಇದ್ದರೂ ಇರಬಹುದು—ಎಸ್. ಜಿ. ಶಾಸ್ತ್ರಿ .... | ೨.೨೫ |
| ಇರುವಂತಿಗೆ—ಕೆ. ಎಸ್. ನರಸಿಂಹಸ್ವಾಮಿ .... | ಅಚ್ಚಿನಲ್ಲಿ |
| ಇವರು ಬಾಪು—ಆರ್. ಕೆ. ಪ್ರಭು .... .... | ೧.೫೦ |
| ಇಂದ್ರವಜ್ರ—ಡಿ. ವಿ. ಜಿ. .... .... | ಅಚ್ಚಿನಲ್ಲಿ |
| ಈಚಲು ಮರದ ಕೆಳಗೆ—ಪು. ತಿ. ನರಸಿಂಹಾಚಾರ್ .... | ೧.೭೫ |
| ಈಶೋಪನಿಷತ್ತು—ಡಿ. ವಿ. ಜಿ. .... .... | ೦.೭೫ |
| ಈಸೋಪನ ನೀತಿಕಥೆಗಳು— .... .... | ಅಚ್ಚಿನಲ್ಲಿ |

ಉಪವನ—ಕೆ. ಎಸ್. ನರಸಿಂಹಸ್ವಾಮಿ .... ಅಚ್ಚಿನಲ್ಲಿ
ಉಮರನ ಒಸಗೆ—ಡಿ. ವಿ. ಜಿ. .... .... ೨.೦೦
ಉಂಗುರ—ಕೆ. ಎಸ್. ನರಸಿಂಹಸ್ವಾಮಿ .... ೧.೨೫
ಉಯ್ಯಾಲೆ—ದ. ರಾ. ಬೇಂದ್ರೆ .... ಪ್ರತಿಗಳು ಮುಗಿದಿವೆ
ಎವರೆಸ್ಟ್ ವೀರ—ತೆನ್‌ಸಿಂಗ್ ಮತ್ತು ಉಲ್ಮನ್ .... ೫.೦೦
ಎಂದೆಂದೂ ಮುಗಿಯದ ಕಥೆ—
ಯು. ಆರ್. ಅನಂತಮೂರ್ತಿ .... ೧.೦೦
ಐರಾವತ—ಕೆ. ಎಸ್. ನರಸಿಂಹಸ್ವಾಮಿ .... ೧.೨೫
ಕಥೆಗಳು—
ಚೆಕಾವ್ (ಅನು : ಹೆಚ್. ವಿ. ಸಾವಿತ್ರಮ್ಮ) .... ಅಚ್ಚಿನಲ್ಲಿ
ಕನ್ನಡ ಋತುಸಂಹಾರ—ಎಸ್. ವಿ. ಪರಮೇಶ್ವರಭಟ್ಟ ೦.೭೫
ಕನ್ನಡ ಮೇಘಸಂದೇಶ—ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿ .... ೦.೭೫
ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ—೧—ಶ್ರೀ .... ೩.೦೦
ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ—೨—ಶ್ರೀ .... ೧.೭೫
ಕಲೆಗಳು ಮತ್ತು ಮಾನವ—ಅರ್ವಿನ್ ಎಡ್ಮನ್ ಅಚ್ಚಿನಲ್ಲಿ
ಕಾವ್ಯಸಮೀಕ್ಷೆ—ತೀ. ನಂ. ಶ್ರೀಕಂಠಯ್ಯ .... ೨.೨೫
ಕಾಂತೆಯರ ಕನಸು—ಜನಾರ್ದನ ಗುರ್ಕಾರ್ ಅಚ್ಚಿನಲ್ಲಿ
ಕುಣಿಗಲ ರಾಮಶಾಸ್ತ್ರಿಗಳ ಚರಿತ್ರೆ—
ಎಂ. ಎಸ್. ಪುಟ್ಟಣ್ಣ .... ೨.೨೫
ಕೋಲು ಕುದುರೆ—ಹೊಯಿಸಳ .... ೦.೫೦
ಗಣೇಶ ದರ್ಶನ—ಪು. ತಿ. ನರಸಿಂಹಾಚಾರ್ ಪ್ರತಿಗಳು ಮುಗಿದಿವೆ
ಗದಾಯುದ್ಧ ಸಂಗ್ರಹಂ—ಸಂ : ತೀ. ನಂ. ಶ್ರೀಕಂಠಯ್ಯ ಅಚ್ಚಿನಲ್ಲಿ
ಗಾನಕಲೆ—ರಾ. ಅನಂತಕೃಷ್ಣ ಶರ್ಮ .... ೧.೫೦
ಗೋಕುಲ ನಿರ್ಗಮನ—ಪು. ತಿ. ನರಸಿಂಹಾಚಾರ್ ಪ್ರತಿಗಳು ಮುಗಿದಿವೆ
ಗೋಖಲೆ : ನನ್ನ ರಾಜಕೀಯ ಗುರು—ಗಾಂಧೀಜಿ ೧.೨೫
ಗೋರಾ—ರವೀಂದ್ರನಾಥ ಠಾಕೂರ್ .... ೨.೫೦

ಗೌರಿಯ ಮದುವೆ—ಸಿ. ಕೃಷ್ಣ .... ೧.೨೫
ಗಂಗಾವತಾರ—ಜನಾರ್ದನ ಗುರ್ಕಾರ್ .... ೧.೨೫
ಚಟಾಕಿ—ಎಲ್. ಗುಂಡಪ್ಪ .... ೦.೫೦
ಚಾಲುಕ್ಯ ವಿಕ್ರಮ—ಶ್ರೀನಿವಾಸರಾವ್ ಕೊರಟಿ ಅಚ್ಚಿನಲ್ಲಿ
ಚಿನ್ನದ ದೋಣಿ—ರವೀಂದ್ರನಾಥ ಠಾಕೂರ್ .... ೧.೫೦
ಚಂದುಮಾಮ—ಹೊಯಿಸಳ .... ೦.೫೦
ಚಂದ್ರನನ್ನು ತಂದರು—ಗ್ರಿಮ್ ಸೋದರರು .... ೦.೫೦
ಛತ್ರಪತಿ ಶಿವಾಜಿ—ಚ. ವಾಸುದೇವಯ್ಯ .... ೨.೫೦
ಜಗತ್ತುಗಳ ಹುಟ್ಟು ಸಾವು—ಆರ್. ಎಲ್. ನರಸಿಂಹಯ್ಯ ೫.೦೦
ಜೀವನ ಸೌಂದರ್ಯ ಮತ್ತು ಸಾಹಿತ್ಯ—ಡಿ. ವಿ. ಜಿ. ಅಚ್ಚಿನಲ್ಲಿ
ಝಾನ್ಸಿಯರಾಣಿ—ವೃಂದಾವನಲಾಲ್ ವರ್ಮ .... ೩.೭೫
ಟಿಬೆಟ್ಟಿನ ಯೋಗಿ ಮಿಲರೇಪ—ಎಸ್. ಕೆ. ರಾಮಚಂದ್ರರಾವ್
ತೆನ್‌ಸ್ಸಿಂಗ್‌ನ ಕಥೆ— .... .... ಅಚ್ಚಿನಲ್ಲಿ
ದೀಪದಮಲ್ಲಿ—ಕೆ. ಎಸ್. ನರಸಿಂಹಸ್ವಾಮಿ .... ೧.೭೫
ದಾದಾಭಾಯಿ ನವರೋಜಿ—ಮಸಾನಿ .... ೨.೫೦
ದೇಶವೇ ಅವರ ತಾಯಿ—ಹೊಯಿಸಳ .... ೧.೨೫
ಧ್ವಜರಕ್ಷಣೆ—ಪು. ತಿ. ನರಸಿಂಹಾಚಾರ್ .... ೧.೨೫
ನನ್ನ ಅಪ್ಸರೆ ಮತ್ತು ಮುಗುದೆಯರ ಪತ್ರಗಳು—
ಸಿ. ಕೃಷ್ಣ .... ೨.೨೫
ನನ್ನ ಬಾಲ್ಯದ ದಿನಗಳು—ರವೀಂದ್ರನಾಥ ಠಾಕೂರ್ ೦.೭೫
ನವ್ಯತೆ ಹಾಗು ಕಾವ್ಯಜೀವನ—ವಿ. ಕೃ. ಗೋಕಾಕ್ ೨.೦೦
ನವ್ಯಸಾಹಿತ್ಯ ನಿರ್ಮಾಣ—ಡಿ. ವಿ. ಜಿ. ಮೊದಲಾದವರು ೦.೨೫
ಸಂಬಿಯಣ್ಣನ ರಗಳೆ—ಸಂ : ತೀ. ನಂ. ಶ್ರೀಕಂಠಯ್ಯ
ಪ್ರತಿಗಳು ಮುಗಿದಿವೆ
ನಿರಾಶ್ರಿತೆ—ಎಚ್. ವಿ. ಸಾವಿತ್ರಮ್ಮ .... ೧.೫೦
ನೀತಿ ಚಿಂತಾಮಣಿ—ಭಾ. ೧—ಎಂ. ಎಸ್. ಪುಟ್ಟಣ್ಣ ೦.೭೫

ನೀತಿ ಚಿಂತಾಮಣಿ—ಭಾ ೨—ಎಂ. ಎಸ್. ಪುಟ್ಟಣ್ಣ .... ೦.೫೦
ನೀತಿ ಚಿಂತಾಮಣಿ—ಭಾ. ೩—ಎಂ. ಎಸ್. ಪುಟ್ಟಣ್ಣ .... ೦.೭೫
ನೌಕಾಘಾತ—ರವೀಂದ್ರನಾಥ ಠಾಕೂರ್ .... ೧.೫೦
ಪಕ್ಷಿಗಾನ—ಆನಂದ .... ೧.೨೫
ಪತಾಕ್ಷಿ—ಹೊಯಿಸಳ .... ೧.೨೫
ಪುಟ್ಟರಸು—ಹೊಯಿಸಳ .... ೧.೦೦
ಪುರುಷಸೂಕ್ತ—ಡಿ. ವಿ. ಜಿ. .... ೧.೨೫
ಪೇಟೆ ಮಾತೇನಜ್ಜಿ?—ಎಂ. ಎಸ್. ಪುಟ್ಟಣ್ಣ .... ೦.೫೦
ಪೋರಿ—ಹೊಯಿಸಳ .... ೦.೫೦
ಪ್ರೇಮಪ್ರಕರಣ—ಕ. ಶಂಕರ .... ೧.೫೦
ಪಂಚತಂತ್ರ— .... .... .... ಅಚ್ಚಿನಲ್ಲಿ
ಬದುಕು ಜಟಕಾಬಂಡಿ—ರಂಗ .... ೧.೫೦
ಬಲಿದಾನ—ರವೀಂದ್ರನಾಥ ಠಾಕೂರ್ .... ೧.೨೫
ಬಾಪೂಜಿಗೆ ಬಾಷ್ಪಾಂಜಲಿ—ಕುವೆಂಪು .... ೦.೫೦
ಬಾಲಗಂಗಾಧರ ತಿಲಕ್— .... .... ಅಚ್ಚಿನಲ್ಲಿ
ಬಿಡಿಮುತ್ತು—ತೀ. ನಂ. ಶ್ರೀಕಂಠಯ್ಯ .... ಅಚ್ಚಿನಲ್ಲಿ
ಬೆಕ್ಕೋಜಿ—ಡಿ. ವಿ. ಜಿ. .... ಅಚ್ಚಿನಲ್ಲಿ
ಬೆಸ್ತರ ಕರಿಯ—ಗೊರೂರು ರಾಮಸ್ವಾಮಿ ಐಯಂಗಾರ್ ೨.೨೫
ಬೆಳದಿಂಗಳ ರಾತ್ರಿ—ರಾಜೇಶ್ವರಿ .... ೧.೫೦
ಬೊಮ್ಮನಹಳ್ಳಿಯ ಕಿಂದರಿಜೋಗಿ—ಕುವೆಂಪು .... ೦.೨೫
ಬೋಧಿಯ ಬೆಳಕಿನಲ್ಲಿ—ಎಸ್. ಕೆ. ರಾಮಚಂದ್ರರಾವ್ ಅಚ್ಚಿನಲ್ಲಿ
ಬೆಂಜಮಿನ್ ಫ್ರಾಂಕ್ಲಿನ್—ಆತ್ಮಚರಿತ್ರೆ .... ೨.೭೫
ಭಾನುಮತೀ ಕಲ್ಯಾಣ—ಹೆಬ್ಬಾರ್ .... ಅಚ್ಚಿನಲ್ಲಿ
ಭಾರತ ದರ್ಶನ—ಭಾ. ೨—ಜವಹರಲಾಲ್ ನೆಹರು .... ೫.೦೦
ಭಾರತ ದರ್ಶನ—ಭಾಗ ೧,೨—ಜವಹರಲಾಲ್ ನೆಹರು .... ೧೧.೦೦
ಭಾವತರಂಗ—ಎಂ. ಗೋ. ಅಡಿಗ .... ೧.೨೫

ಭೀಷ್ಮ ಚರಿತೆ—ಚ. ವಾಸುದೇವಯ್ಯ .... ೩.೨೫
ಭೂಗರ್ಭಯಾತ್ರೆ—ಜೂಲ್ಸ್ ವರ್ನ್ .... ೧.೭೫
ಭ್ರಮಾಧೀನ—ಸೇವ ನಮಿರಾಜಮಲ್ಲ .... ೧.೫೦
ಮನೆ-ಜಗತ್ತು—ರವೀಂದ್ರನಾಥ ಠಾಕೂರ್ .... ೧.೫೦
ಮಮತೆಯ ಸುಳಿ—ಶ್ರೀನಿವಾಸರಾವ್ ಕೊರಟಿ .... ೧.೨೫
ಮರುಮದುವೆ—ಎಚ್. ವಿ. ಸಾವಿತ್ರಮ್ಮ .... ಅಚ್ಚಿನಲ್ಲಿ
ಮಲೆದೇಗುಲ—ಪು. ತಿ. ನರಸಿಂಹಾಚಾರ್ .... ೧.೦೦
ಮಹಾಜನಾವಣೆ—ಡಿ. ವಿ. ಜಿ. .... ೦.೨೫
ಮಹಾತ್ಮಾ ಗಾಂಧಿಯವರ ಜೀವನ ಚರಿತೆ—
ಲೂಯಿ ಫಿಷರ್ .... ಅಚ್ಚಿನಲ್ಲಿ
ಮಹಾದೇವ ಗೋವಿಂದ ರಾನಡೆ— .... ಅಚ್ಚಿನಲ್ಲಿ
ಮಂಕುತಿಮ್ಮನ ಕಗ್ಗ—ಡಿ. ವಿ. ಜಿ. .... ೧.೭೫
ಮಾಡಿದ್ದುಣ್ಣೋ ಮಹಾರಾಯ—ಎಂ. ಎಸ್. ಪುಟ್ಟಣ್ಣ ೩.೦೦
ಮುಸುಗ ತೆಗೆಯೇ ಮಾಯಾಂಗನೆ—
ಎಂ. ಎಸ್. ಪುಟ್ಟಣ್ಣ .... ೧.೫೦
ಮೂಕಪ್ರೇಮ—ವಿಶಾಲಾಕ್ಷಿ .... ೧.೫೦
ಮೂಲಾನಕ್ಷತ್ರ—ಶೇಷನಾರಾಯಣ .... ೧.೨೫
ಮೊಲ್ಲೆ-ಮಲ್ಲಿಗೆ—ಶೇಷನಾರಾಯಣ .... ಅಚ್ಚಿನಲ್ಲಿ
ಯಮನ ಸೋಲು ಮತ್ತು ವಾಲ್ಮೀಕಿಯ ಭಾಗ್ಯ—
ಕುವೆಂಪು .... ೧.೦೦
ಯೋಗಾಯೋಗ—ರವೀಂದ್ರನಾಥ ಠಾಕೂರ್ .... ೨.೫೦
ರಕ್ತ ಕರವೀರ—ರವೀಂದ್ರನಾಥ ಠಾಕೂರ್ .... ಅಚ್ಚಿನಲ್ಲಿ
ರಥಸಪ್ತಮಿ—ಪು. ತಿ. ನರಸಿಂಹಾಚಾರ್ .... ೧.೨೫
ರಾಕ್ಷಸನ ಮುದ್ರಿಕೆ—ತೀ. ನಂ. ಶ್ರೀಕಂಠಯ್ಯ .... ಅಚ್ಚಿನಲ್ಲಿ
ರಾಜಕೀಯ ಪ್ರಸಂಗಗಳು—೧ ಡಿ. ವಿ. ಜಿ. .... ೧.೭೫
ರಾಜಕೀಯ ಪ್ರಸಂಗಗಳು—೨ ಡಿ. ವಿ. ಜಿ. .... ಅಚ್ಚಿನಲ್ಲಿ

ರಾಜಾ ರಾಮಮೋಹನರಾಯ್— .... ಅಚ್ಚಿನಲ್ಲಿ
ರಂಗಯ್ಯನ ವಚನಗಳು—ಎಸ್. ವಿ. ರಂಗಣ್ಣ .... ಅಚ್ಚಿನಲ್ಲಿ
ರಾಜ್ಯಶಾಸ್ತ್ರ—ಡಿ. ವಿ. ಜಿ. .... ೫.೦೦
ರಾಜ್ಯಾಂಗ ತತ್ತ್ವಗಳು—ಡಿ. ವಿ. ಜಿ. .... ೧.೨೫
ರಾಬಿನ್‌ಸನ್ ಕ್ರೂಸೋ ಕಥೆ—ಡೀಫೋ .... ಅಚ್ಚಿನಲ್ಲಿ
ರೈಟ್ ಸಹೋದರರು—
ರೇನಾಲ್ಡ್ಸ್ (ಅನು : ಹೊಯಿಸಳ) .... ೧.೨೫
ರಂಗಭೂಮಿ—ಕ. ಶಂಕರ .... ೧.೫೦
ಲೂಯಿ ಪ್ಯಾಶ್ಚರ್—ಎಸ್. ವಿ. ಕೃಷ್ಣಮೂರ್ತಿರಾವ್ .... ಪ್ರತಿಗಳು ಮುಗಿದಿವೆ
ಲೌಕಿಕ ನ್ಯಾಯಗಳು—ರಂಗನಾಥ ಶರ್ಮ .... ಅಚ್ಚಿನಲ್ಲಿ
ವಸಂತ ಕುಸುಮಾಂಜಲಿ—ಡಿ. ವಿ. ಜಿ. .... ೦.೭೫
ವಿಕಟಕವಿ ವಿಜಯ—ಪು. ತಿ. ನರಸಿಂಹಾಚಾರ್ .... ೨.೨೫
ವಿನೋದಿನಿ—ರವೀಂದ್ರನಾಥ ಠಾಕೂರ್ .... ೧.೫೦
ವಿಮರ್ಶೆ-ಸಾಹಿತ್ಯ .... ಅಚ್ಚಿನಲ್ಲಿ
ವಿವಾಹವಿಚ್ಛೇದ—ಕ. ಶಂಕರ .... ೧.೫೦
ವೃತ್ತಪತ್ರಿಕೆ—ಡಿ. ವಿ. ಜಿ. .... ಅಚ್ಚಿನಲ್ಲಿ
ಶಾರದಯಾಮಿನಿ—ಪು. ತಿ. ನರಸಿಂಹಾಚಾರ್ .... ೧.೦೦
ಶಿಲಾಲತೆ—ಕೆ. ಎಸ್. ನರಸಿಂಹಸ್ವಾಮಿ .... ೧.೫೦
ಶಿವರಾತ್ರಿ—ಗೊರೂರು ರಾಮಸ್ವಾಮಿ ಐಯಂಗಾರ್ .... ೨.೨೫
ಶ್ರೀಪತಿಯ ಕಥೆಗಳು—ಶ್ರೀಪತಿ ಪ್ರತಿಗಳು ಮುಗಿದಿವೆ
ಶ್ರೀ ರಾಮಕೃಷ್ಣ ಪರಮಹಂಸ—ಕುವೆಂಪು .... ೩.೭೫
ಶ್ರೀ ರಾಮಾಶ್ವಮೇಧಂ—ಮುದ್ದಣ .... ೩.೨೫
ಶೂದ್ರತಪಸ್ವಿ ಮತ್ತು ಬಲಿದಾನ—ಕುವೆಂಪು .... ೧.೨೫
ಶೈಲಿ—ಭಾ. ೧—ಎಸ್. ವಿ. ರಂಗಣ್ಣ ಪ್ರತಿಗಳು ಮುಗಿದಿವೆ
ಶೈಲಿ—ಭಾ. ೨—ಎಸ್. ವಿ. ರಂಗಣ್ಣ .... ೨.೫೦

| | |
|---|---|
| ಷೋಡಶಿ—ಕುವೆಂಪು .... | ೧.೫೦ |
| ಶುಭದಾ—ಶರಚ್ಚಂದ್ರ .... | ೧.೫೦ |
| ಸತ್ಯವೇ ದೇವರು—ಗಾಂಧೀಜಿ .... | ಅಚ್ಚಿನಲ್ಲಿ |
| ಸಾಹಿತ್ಯ—ಠಾಕೂರ್ (ಡಾ|| ಎ. ಎನ್. ನರಸಿಂಹಯ್ಯ) | ೨.೦೦ |
| ಸಾಹಿತ್ಯ ಮತ್ತು ಜೀವನಕಲೆ—<br>ರಾ. ಅನಂತಕೃಷ್ಣ ಶರ್ಮ .... | ೨.೨೫ |
| ಸಾಹಿತ್ಯ ಶಕ್ತಿ—ಡಿ. ವಿ. ಜಿ. .... | ೨.೨೫ |
| ಸಿದ್ಧರಾಮಚರಿತೆಯ ಸಂಗ್ರಹ—<br>ಸಂ: ಡಿ. ಎಲ್. ನರಸಿಂಹಾಚಾರ್ | ೨.೦೦ |
| ಸಿರಿಬಾಯಿನುಡಿ—ಪು. ತಿ. ನರಸಿಂಹಾಚಾರ್ .... | ೦.೫೦ |
| ಸುಮತಿ ಮದನಕುಮಾರರ ಚರಿತ್ರೆ—ಎಂ. ಎಸ್. ಪುಟ್ಟಣ್ಣ | ೩.೨೫ |
| ಸೊಹ್ರಾಬ್ ಮತ್ತು ರುಸ್ತುಂ—ಕ. ನರಸಿಂಹಶಾಸ್ತ್ರಿ .... | ೦.೭೫ |
| ಸ್ಮರಭಸ್ಮ—(ಅನು: ಎಚ್. ವಿ. ಸಾವಿತ್ರಮ್ಮ) .... | ಅಚ್ಚಿನಲ್ಲಿ |
| ಸಂಸ್ಕೃತಿ—ಡಿ. ವಿ. ಜಿ. .... | ೨.೦೦ |
| ಹಗಲುಗನಸುಗಳು—ಎ. ಎನ್. ಮೂರ್ತಿರಾವ್ .... | ೧.೨೫ |
| ಹವಳದ ದ್ವೀಪ—ಎ. ಎನ್. ಮೂರ್ತಿರಾವ್ .... | ೧.೨೫ |
| ಹಸಿವು, ಹಸಿವು— .... | ಅಚ್ಚಿನಲ್ಲಿ |
| ಹಳ್ಳಿಯ ಬಾಳು—ಗೊರೂರು ರಾಮಸ್ವಾಮಿ ಐಯಂಗಾರ್ | ೨.೨೫ |
| ಹಳ್ಳಿಯ ಹಾಡುಗಳು—ಸಂ: ಮಹದೇವನಾಯಕ್ .... | ೧.೫೦ |
| ಹಾವಾಡಿಗ—ರಾಘವ .... | ಅಚ್ಚಿನಲ್ಲಿ |
| ಹಾಳೂರು—ಕುವೆಂಪು .... | ೦.೫೦ |
| ಹುಲಿಯನೇರಿದವನು— .... | ಅಚ್ಚಿನಲ್ಲಿ |
| ಹೂವಾಡಿಗಿತ್ತಿ—ರಾಘವ .... | ೦.೫೦ |
| ಹೂವಿನ ಹಾಸಿಗೆ—ಹೊಯಿಸಳ .... | ೧.೨೫ |
| ಹೂವು ಚೆಲ್ಲಿದ ಹಾದಿಯಲ್ಲಿ—ಕೆ. ವಿ. ಸುಬ್ಬಣ್ಣ .... | ೧.೫೦ |
| ಹೆಲನ್ ಕೆಲರ್—(ಅನುವಾದ: ಚಿ. ನ. ಮಂಗಳ) .... | ಅಚ್ಚಿನಲ್ಲಿ |

## ENGLISH PUBLICATIONS

| | | Rs. nP. |
|---|---|---|
| PROF. M. HIRIYANNA— | | |
| *Art Experience* | ... | 6.00 |
| *Indian Philosophical Studies*—I | ... | 7.50 |
| *Indian Philosophical Studies*—II | | In the Press |
| *Isa Upanisad* | | In the Press |
| *Katha Upanisad* | | In the Press |
| *Kena Upanisad* | | In the Press |
| *Popular Essays in Indian Philosophy* | ... | 5.00 |
| *The Mission of Philosophy* | | In the Press |
| *Sanskrit Studies* | ... | 4.00 |
| *The Quest After Perfection* | ... | 5.00 |
| R. P. MASANI— | | |
| *Dadabhai Naoroji* (Abr. Ed.) | ... | 2.50 |
| C. V. SRINIVASA MURTY— | | |
| *Elements of Social Science* | ... | 2.25 |
| *Elements of Logic and Scientific Method* | | 2.25 |
| S. K. RAMACHANDRA RAO— | | |
| *The Elements of Early Buddhist Psychology* | ... | 1.25 |
| *The Idea of Sarvodaya* | ... | 0.75 |

# ಎವರೆಸ್ಟ್ ವೀರ

## ತೆನ್‌ಸಿಂಗ್ ಮತ್ತು ಉಲ್ಮನ್

೩೮೪ ಪುಟಗಳು ; ೩೨ ಚಿತ್ರಗಳು ; ಬೆಲೆ, ರೂ. ೫.೦೦

## ಅಖಿಲ ಭಾರತ ಸ್ಪರ್ಧೆಯಲ್ಲಿ ರಾಷ್ಟ್ರಪ್ರಶಸ್ತಿಯನ್ನು ಗಳಿಸಿದ ಪುಸ್ತಕ

ಇದು ಎವರೆಸ್ಟ್ ವೀರ ತೆನ್‌ಸಿಂಗ್‌ನ ಆತ್ಮಕಥೆ. ೧೯೫೩ರ ಮೇ ತಿಂಗಳಲ್ಲಿ ಅವನು ಹಿಲರಿಯೊಡನೆ ಹಿಮಾಲಯದ ಅತ್ಯುನ್ನತ ಶಿಖರವಾದ ಎವರೆಸ್ಟನ್ನು ಏರಿ ವಿಶ್ವಖ್ಯಾತಿಯನ್ನೂ ವಿಶ್ವೋನ್ನತಿಯನ್ನೂ ಗಳಿಸಿದನು. ಈ ಕಥೆಯ ಉದ್ದಕ್ಕೂ ಹಸನ್ಮುಖಿಯಾದ ಈ ಷರ್ಪಾ ಪರ್ವತಪುತ್ರನ ಸರಳತೆಯೂ, ಪ್ರಾಮಾಣಿಕತೆಯೂ, ಮೋಹಕವಾದ ಗೆಲವೂ ಓದುಗರ ಮನಸ್ಸನ್ನು ಸೆರೆಗೊಳ್ಳುತ್ತವೆ.

The book and its hero are more loveable than I expected they would be . . . Your language is . . . clear, simple and good . . .

—PROF. A. R. KRISHNASASTRI

The book of the Everest Climber is really fascinating . . . The grace of style . . . is felt everywhere in its pages.

—P. T. NARASIMHACHAR

ಈ ಜಗದ್ವಿಖ್ಯಾತ ಸಾಹಸಿಯ ನಿರೂಪಣೆ ರೋಮಾಂಚಕಾರಿಯಾಗಿದೆ. ಇದನ್ನು ಕನ್ನಡಿಸಿದವರು ಕನ್ನಡ ಓದುಗರ ಅಭಿನಂದನೆಗೆ ಪಾತ್ರರು.

—ರಾಷ್ಟ್ರಮತ

The Heads of High and Middle Schools and the Training Institutions in the State are *directed to purchase* a copy of the book "Everest Veera" (Kannada) for the Libraries of their institutions—as per Memo. No. T. 3. 157-176/56-57 3rd March, 1957 of the D.P.I.

# ಮಂಕುತಿಮ್ಮನ ಕಗ್ಗ

(ಮೂರನೆಯ ಆವೃತ್ತಿ)

## ನೂತನಾಕಾರದ ಸುಂದರ ಮುದ್ರಣ

೨೦೨ ಪುಟಗಳು ; ಬೆಲೆ, ರೂ. ೧.೭೫

ಆಧುನಿಕ ಕನ್ನಡ ಸಾಹಿತ್ಯದಲ್ಲಿ . . . ಒಂದು ಮಹಾ ವಾಕ್ಯಗಳ ರತ್ನಾವಳಿ "ಮಂಕುತಿಮ್ಮನ ಕಗ್ಗ". ಅದು ನಿಜವಾಗಿ ಕಗ್ಗವೂ ಅಲ್ಲ, ಹಗ್ಗವೂ ಅಲ್ಲ—ಸಗ್ಗ. ವೇದಾಂತ ಸಾರ ಸಂಗ್ರಹ; ವಿದ್ವತ್ ಸಾಧಕರೊಬ್ಬರ ಅನುಭವಾಮೃತ.

—PROF. A. R. KRISHNASASTRI

ಹಸ್ತಕ್ಕೆ ಬರೆ ನಕ್ಕೆ ; ಓದುತ್ತ ಓದುತ್ತ |
ಮಸ್ತಕಕ್ಕಿಟ್ಟು ಗಂಭೀರವಾದೆ ||
ವಿಸ್ತರದ ದರ್ಶನಕೆ ತುತ್ತತುದಿಯಲ್ಲಿ ನಿನ್ನ |
ಪುಸ್ತಕಕೆ ಕೈಮುಗಿದೆ—ಮಂಕುತಿಮ್ಮ ||

—PROF. (*Now* Dr.) K. V. P.

'Manku Thimma' . . . covers the entire field of Hindu religious, philosophical and ethical thoughts.

—The Hindu

. . . The finest philosophical poem of our time in Kannada.

—PROF. B. M. SRIKANTIA

It is, in brief, a classic of popular Vedanta; and I hope that it will soon come to be regarded so in the whole of the Kannada country.

—PROF. M. HIRIYANNA

# ಉಡುಗೊರೆಗೆ ತಕ್ಕ ಪುಸ್ತಕಗಳು

| | |
|---|---|
| | ರೂ.ನ.ಪೈ |
| ಅನ್ತಃಪುರಗೀತೆ—ಡಿ. ವಿ. ಜಿ. | ೩.೫೦ |
| ಅಲೆಯುವ ಮನ—ಎ. ಎನ್. ಮೂರ್ತಿರಾವ್ | ೨.೨೫ |
| ಇರುವಂತಿಗೆ—ಕೆ. ಎಸ್. ನರಸಿಂಹಸ್ವಾಮಿ | ೧.೨೫ |
| ಶಿಲಾಲತೆ—ಕೆ. ಎಸ್. ನರಸಿಂಹಸ್ವಾಮಿ | ೧.೫೦ |
| ದೀಪದಮಲ್ಲಿ—ಕೆ. ಎಸ್. ನರಸಿಂಹಸ್ವಾಮಿ | ೧.೫೫ |
| ಐರಾವತ—ಕೆ. ಎಸ್. ನರಸಿಂಹಸ್ವಾಮಿ | ೧.೨೫ |
| ಮಂಕುತಿಮ್ಮನ ಕಗ್ಗ—ಡಿ. ವಿ. ಜಿ. | ೧.೭೭ |
| ಉಮರನ ಒಸಗೆ—ಡಿ. ವಿ. ಜಿ. | ೨.೦೦ |
| ಉಂಗುರ—ಕೆ. ಎಸ್. ನರಸಿಂಹಸ್ವಾಮಿ | ೧.೨೫ |
| ಗಾನಕಲೆ— ರಾ. ಅನಂತಕೃಷ್ಣ ಶರ್ಮ | ೧.೫೦ |
| ಚಿನ್ನದ ದೋಣಿ—ರವೀಂದ್ರನಾಥ ಠಾಕೂರ್ | ೧.೫೦ |
| ಎವರೆಸ್ಟ್ ವೀರ—ತೆನ್‌ಸಿಂಗ್ ಮತ್ತು ಉಲ್ಮನ್ | ೫.೦೦ |
| ನನ್ನ ಅಪ್ಸರೆ ಮತ್ತು ಮುಗುದೆಯರ ಪತ್ರಗಳು—ಸಿ. ಕೃಷ್ಣ | ೨.೨೫ |
| ಷೋಡಶಿ—ಕುವೆಂಪು | ೧.೫೦ |
| ರಥಸಪ್ತಮಿ—ಪು. ತಿ. ನ. | ೧.೨೫ |
| ಶ್ರೀರಾಮಾಶ್ವಮೇಧಂ—ಮುದ್ದಣ | ೩.೨೫ |
| ಸಾಹಿತ್ಯ ಶಕ್ತಿ—ಡಿ. ವಿ. ಜಿ. | ೨.೨೫ |
| ಸಂಸ್ಕೃತಿ—ಡಿ. ವಿ. ಜಿ. | ೨.೦೦ |
| ಸ್ಮರಭಸ್ಮ—(ಅನು : ಹೆಚ್. ವಿ. ಸಾವಿತ್ರಮ್ಮ) | |
| ಗೌರಿಯ ಮದುವೆ—ಸಿ. ಕೃಷ್ಣ | ೧.೨೫ |

---